# ಮೈಸೂರು ವಿಶ್ವವಿದ್ಯಾನಿಲಯ
## ಪ್ರಚಾರ ಪುಸ್ತಕಮಾಲೆ

೧. ಖಗೋಳಶಾಸ್ತ್ರ ಪ್ರವೇಶ—ಸಿ. ಎಸ್. ಶ್ರೀನಿವಾಸ ಅಯ್ಯಂಗಾರ್, ಡಿ.ಎಸ್‌ಸಿ.
೨. ಸಮಾಜದ ರೋಗರುಜಿನಗಳು—ಜಿ. ಹನುಮಂತರಾವ್, ಎಂ.ಎ.
೩. ತೆರಿಗೆ—ಬಿ. ಆರ್. ಸುಬ್ಬರಾವ್, ಎಂ. ಎ.
೪. ನವರತ್ನಗಳು—ಹೆಚ್. ಸುಬ್ಬಾಜೋಯಿಸ್, ಎಂ.ಎಸ್‌ಸಿ.,
೫. ನಮ್ಮ ಹಳ್ಳಿಗಳು—ಜಿ. ಎನ್. ಕೃಷ್ಣಮೂರ್ತಿ, ಎಂ. ಎ.
೬. ಕುಮಾರವ್ಯಾಸ—ಎಸ್. ವಿ. ರಂಗಣ್ಣ, ಎಂ. ಎ,
೭. ಹಂಪೆಯ ಹರಿಹರ—ಡಿ. ಎಲ್. ನರಸಿಂಹಾಚಾರ್, ಎಂ. ಎ.
೮. ಕನ್ನಡ ಸಾಹಿತ್ಯ—ಕೆ. ವೆಂಕಟರಾಮಪ್ಪ, ಎಂ. ಎ.
೯. ವಿದ್ಯುಚ್ಛಕ್ತಿಯ ವೈಭವ—ಬಿ.ಎ. ಕೃಷ್ಣಸ್ವಾಮಿರಾವ್, ಎಂ.ಎಸ್‌ಸಿ.
೧೦. ಪಂಪ—ಟಿ. ಎನ್. ಶ್ರೀಕಂಠಯ್ಯ, ಎಂ. ಎ.
೧೧. ಪ್ರಾಣಿಜೀವನ—ಎ. ನಾರಾಯಣರಾವ್, ಎಂ. ಎಸ್‌ಸಿ.,
೧೨. ಕನಸುಗಳು—ಡಾ|| ಎನ್. ಎಸ್. ನಾರಾಯಣಶಾಸ್ತ್ರಿ, ಎಂ. ಎ. ಡಿ. ಲಿಟ್.
೧೩. ಮದುವೆ—ಎನ್. ಕಸ್ತೂರಿ, ಎಂ. ಎ., ಬಿ. ಎಲ್.
೧೪.*ನಮ್ಮ ಆರ್ಥಿಕ ದೃಷ್ಟಿ—ಎಸ್. ಗೋಪಾಲಸ್ವಾಮಿ, ಎಂ. ಎ.
೧೫. ವಾಯುಗುಣ—ಕೆ. ಶೇಷಾದ್ರಿ ಅಯ್ಯಂಗಾರ್, ಎಂ.ಎಸ್‌ಸಿ., ಎಲ್‌ಎಲ್.ಬಿ.
೧೬. ಬೆಳಕು—ಟಿ. ಎಸ್. ಸುಬ್ಬರಾಯ, ಎಂ.ಎಸ್‌ಸಿ.,
೧೭. ಕರ್ನಾಟಕ ಕಾದಂಬರಿ—ವಿ. ಸೀತಾರಾಮಯ್ಯ, ಎಂ.ಎ.
೧೮. ಕಾಳಿದಾಸನ ಕಾವ್ಯಗಳು—ಎಸ್. ರಾಮಚಂದ್ರರಾವ್, ಎಂ.ಎ
೧೯. ಇಂಗ್ಲೆಂಡಿನ ರಾಜಕೀಯ ಬೆಳವಣಿಗೆ—ಪಿ. ಜಿ. ಸತ್ಯಗಿರಿನಾಥನ್, ಎಂ.ಎ.
೨೦. ಕಣ್ಣು ಮತ್ತು ಅದರ ರಕ್ಷಣೆ—ಡಿ. ಶಾಮಣ್ಣ, ಬಿ.ಎ., ಎಂ.ಬಿ.ಬಿಎಸ್.
೨೧. ಸಾರ್ವಜನಿಕ ವೆಚ್ಚ—ಡಾ|| ಎಂ. ಹೆಚ್. ಗೋಪಾಲ್, ಎಂ.ಎ., ಪಿಹೆಚ್.ಡಿ.
೨೨. ಶಿಶುವಿಹಾರಗಳು—ಸಿ. ರಂಗಾಚಾರ್, ಬಿ.ಎಸ್‌ಸಿ., ಎಂ.ಎಡ್.
೨೩. ಸಂಖ್ಯೋದ್ಯಾನ—ಬಿ. ಸೀತಾರಾಮಶಾಸ್ತ್ರಿ, ಎಂ.ಎ.
೨೪. ವಿಡಂಬನ—ಎಸ್. ವಿ. ರಂಗಣ್ಣ, ಎಂ.ಎ.

ಮೈಸೂರು ವಿಶ್ವವಿದ್ಯಾನಿಲಯ

ಪ್ರಚಾರ ಪುಸ್ತಕಮಾಲೆ—೫೯

# ಜನಪದ ಮುಕ್ತಕಗಳು

ಎಚ್. ಎಂ. ಶಂಕರನಾರಾಯಣರಾವ್, ಎಂ.ಎ.,




ಮೈಸೂರು ವಿಶ್ವವಿದ್ಯಾನಿಲಯ
ಮೈಸೂರು
೧೯೫೮

ಎರಡನೆಯ ಮುದ್ರಣ

೩,೦೦೦ ಪ್ರತಿಗಳು



ಬೆಲೆ :

ಸಾದಾಪ್ರತಿ : ೨೫ ನಯೆ ಪೈಸೆ

ಉತ್ತಮಪ್ರತಿ : ೩೭ ನಯೆ ಪೈಸೆ

ಮುದ್ರಕರು :

ಮೈಸೂರು ಪವರ್ ಪ್ರೆಸ್, ಮೈಸೂರು.

# ಮುನ್ನುಡಿ

ಕನ್ನಡ ನಾಡಿನ ಜನಸಾಮಾನ್ಯರಲ್ಲಿ ಜ್ಞಾನ ಪ್ರಸಾರವಾಗ ಬೇಕೆಂಬ ದೃಷ್ಟಿಯಿಂದ ಮೈಸೂರು ವಿಶ್ವವಿದ್ಯಾನಿಲಯದ ಪ್ರಚಾರ ಪುಸ್ತಕ ಉಪನ್ಯಾಸಮಾಲೆ ಪ್ರಾರಂಭವಾಯಿತು. ಈಗಾಗಲೇ ೫೭ ಪುಸ್ತಕಗಳು ಈ ಮಾಲೆಯಲ್ಲಿ ಪ್ರಕಟವಾಗಿ ಜನಪ್ರಿಯವಾಗಿವೆ. ಪ್ರಾಜ್ಞರಾದವರು ಬರೆದ ಈ ಪುಸ್ತಕಗಳ ವಿಷಯ ಕ್ಷೇತ್ರ ವಿಸ್ತಾರವಾದುದು. ಅತಿ ಸುಲಭವಾದ ಬೆಲೆ ಇಟ್ಟಿರುವುದರಿಂದ ಇವು ಎಲ್ಲರಿಗೂ ದೊರಕುವಂತಾಗಿವೆ. ಸರ್ವತೋಮುಖವಾಗಿ ಬೆಳೆಯುತ್ತಿರುವ ಕನ್ನಡ ನಾಡಿನಲ್ಲಿ ಈ ಪುಸ್ತಕಗಳು ಮನೆಮನೆಯನ್ನು ಬೆಳಗುವ ಕೈದೀವಿಗೆಗಳಾಗ ಲೆಂದು ಹಾರೈಸುತ್ತೇನೆ.

ಮೈಸೂರು
ತಾ|| ೧-೧೨-೧೯೫೪

**ಬಿ. ಎಲ್. ಮಂಜುನಾಥ್**
ವೈಸ್ ಛಾನ್ಸೆಲರ್

# ಅರಿಕೆ

ಜನಪದ ಮುಕ್ತಕಗಳ ವಿಚಾರವನ್ನು ಕುರಿತು ನನಗೆ ತೋರಿದ ನಾಲ್ಕು ಮಾತುಗಳನ್ನು ಹೇಳಲು ಇಲ್ಲಿ ನಾನು ಪ್ರಯತ್ನಮಾಡಿದ್ದೇನೆ. ವಿಷಯವನ್ನು ವಿವರಿಸಲು ನಾನು ಆಯ್ದುಕೊಂಡಿರುವ ಇಲ್ಲಿನ ಹಲವು ಮುಕ್ತಕಗಳು ನನಗೆ ಚಿಕ್ಕಂದಿನಿಂದಲೂ ಪರಿಚಯವಾಗಿದ್ದವು. ಆದರೆ ಆಗ ಅವುಗಳ ಸ್ವಾರಸ್ಯ ನನಗೆ ಅರಿವಾಗಿರಲಿಲ್ಲ. ಶ್ರೀಮಾನ್ ದ. ರಾ. ಬೇಂದ್ರೆಯವರ ಮುನ್ನುಡಿಯಿಂದ ಅಲಂಕೃತವಾದ 'ಗರತಿಯ ಹಾಡ'ನ್ನು ಓದಿದಾಗ ಅವುಗಳ ಸ್ವಾರಸ್ಯಕ್ಕೆ ನಾನು ಮರುಳಾಗಿ ಮನಸೋಲುವಂತಾಯಿತು. ಅಂದಿನಿಂದ ಈವರೆಗೆ ಜನಪದ ಸಾಹಿತ್ಯಕ್ಕೆ ಸಂಬಂಧಿಸಿದ ಗ್ರಂಥಗಳನ್ನು ಓದುವುದು, ಅವುಗಳನ್ನು ಸಂಗ್ರಹಿಸಿ ಪ್ರಕಟಿಸುವುದು, ನನಗೆ ರುಚಿಸಿದ ಈ ಸಾಹಿತ್ಯ ಭಾಗವನ್ನು ಕುರಿತು ವಿದ್ಯಾರ್ಥಿಗಳಲ್ಲಿ ಪ್ರಸಾರಮಾಡುವುದು ನನಗೆ ಗೀಳಾಗಿ ಪರಿಣಮಿಸಿದೆ.

೧೯೫೧ನೆಯ ಜನವರಿ ತಿಂಗಳಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಅಧ್ಯಾಪಕ ಸಂಘದವರು ಏರ್ಪಡಿಸಿದ ಪ್ರಚಾರೋಪನ್ಯಾಸಮಾಲೆಯಲ್ಲಿ ಈ ವಿಷಯವನ್ನು ಕುರಿತು ಚಳ್ಳಕೆರೆಯಲ್ಲಿ ನಾನು ಉಪನ್ಯಾಸಮಾಡಿದೆನು. ನನ್ನ ಉಪನ್ಯಾಸವನ್ನು ಕೇಳಿದ ಹಿರಿಯರೂ, ಈ ಪ್ರಚಾರೋಪನ್ಯಾಸಮಾಲೆಯ ಉಸಿರಿನಂತಿರುವವರೂ ಆದ ಶ್ರೀಮಾನ್ ಜಿ. ಹನುಮಂತ

ರಾಯರು ಮೆಚ್ಚಿ ನನ್ನನ್ನು ಪ್ರೋತ್ಸಾಹಿಸಿದರು. ಈ ಮೆಚ್ಚಿಗೆ ಪ್ರೋತ್ಸಾಹಗಳಿಗಾಗಿ ಅವರಿಗೆ ನಾನು ಅತ್ಯಂತ ಕೃತಜ್ಞನಾಗಿದ್ದೇನೆ. ಆದರೆ ಅವರ ಮೆಚ್ಚಿಗೆ ಪ್ರೋತ್ಸಾಹಗಳು ಅಷ್ಟಕ್ಕೇ ನಿಲ್ಲಲಿಲ್ಲ. ಕಾನಕಾನಹಳ್ಳಿ, ಅಜ್ಜಂಪುರ, ಮಾಲೂರು, ಚಿಕ್ಕಬಳ್ಳಾಪುರ ಈ ಸ್ಥಳಗಳಲ್ಲಿ ನಾನು ಈ ವಿಷಯವನ್ನು ಕುರಿತು ಉಪನ್ಯಾಸಮಾಡುವಂತೆ ಏರ್ಪಡಿಸಿದರು. ವಿಷಯ ಜನರ ಮನಸ್ಸನ್ನು ಸೆರೆಹಿಡಿಯಿತು. ನನ್ನ ಭಾಷಣದ ಸಾರಾಂಶವನ್ನು ಅನೇಕರು ಪುಸ್ತಕದ ರೂಪದಲ್ಲಿ ಬಯಸಿದರು. ಜನತೆಯ ಬಯಕೆಯನ್ನು ಈಡೇರಿಸುವುದರ ಸಲುವಾಗಿ ಮೇಲೆ ಹೇಳಿದ ಸ್ಥಳಗಳಲ್ಲಿ ನಾನು ಕೊಟ್ಟ ಉಪನ್ಯಾಸಗಳ ತಳಹದಿಯ ಮೇಲೆ ಈ ಚಿಕ್ಕ ಪುಸ್ತಕವನ್ನು ರಚಿಸಿದ್ದೇನೆ. ಈ ಮೊದಲೇ ಅನೇಕರು ಈ ಸಾಹಿತ್ಯವನ್ನು ಸಂಗ್ರಹಿಸಿ ಪುಸ್ತಕರೂಪದಲ್ಲಿ ಪ್ರಕಟಿಸಿದ್ದಾರೆ. ಅವರ ಸ್ವಾರಸ್ಯವನ್ನು ವಿವರಿಸಿದ್ದಾರೆ. ಆ ಗ್ರಂಥಗಳಿಂದ ನಾನು ತುಂಬ ಉಪಕೃತನಾಗಿದ್ದೇನೆ. ವಾಚಕರ ಉಪಯೋಗಕ್ಕಾಗಿ ಆ ಸಾಧನಸಾಹಿತ್ಯದ ಪಟ್ಟಿಯೊಂದನ್ನು ಗ್ರಂಥದ ಕೊನೆಯಲ್ಲಿ ಕೊಟ್ಟಿದ್ದೇನೆ.

ಕೊನೆಯದಾಗಿ ಈ ವಿಷಯವನ್ನು ಕುರಿತು ಬೇರೆ ಬೇರೆ ಸ್ಥಳಗಳಲ್ಲಿ ನಾನು ಉಪನ್ಯಾಸಮಾಡಲು ಅವಕಾಶಕೊಟ್ಟ ಮೈಸೂರು ವಿಶ್ವವಿದ್ಯಾನಿಲಯಕ್ಕೂ, ಇದನ್ನು ಪ್ರಕಟಿಸಲು ಸಹಾಯಮಾಡಿದ ಸಂಪಾದಕ ಮಂಡಲಿಗೂ ಅದರ ಕಾರ್ಯದರ್ಶಿಗಳಾದ ಶ್ರೀಮಾನ್ ಜಿ. ಹನುಮಂತರಾಯರಿಗೂ ನಾನು ಅತ್ಯಂತ ಕೃತಜ್ಞನಾಗಿದ್ದೇನೆ. ಈ ಗ್ರಂಥವನ್ನು ಈ ರೂಪಕ್ಕೆ

ತರಲು ಸಹಾಯಮಾಡಿದ ನನ್ನ ಪ್ರಿಯ ಗುರುಗಳಾದ ಶ್ರೀ ಡಿ. ಎಲ್. ನರಸಿಂಹಾಚಾರ್ಯರಿಗೂ ನನ್ನ ಕೃತಜ್ಞತೆಗಳು ಸಲ್ಲುತ್ತವೆ. ನನ್ನ ಮಿತ್ರರೂ ಮತ್ತು ಈ ಮಾಲೆಯ ಕಾರ್ಯದರ್ಶಿಗಳೂ ಆದ ಶ್ರೀ ಯು. ಕೆ. ಸುಬ್ಬರಾಯಾಚಾರ್ಯರ ಸಹಕಾರವನ್ನು ಇಲ್ಲಿ ನಾನು ತುಂಬು ಮನಸ್ಸಿನಿಂದ ನೆನೆಯುತ್ತೇನೆ.

ಶಾರದಾ ವಿಲಾಸ ಕಾಲೇಜು,
ಮೈಸೂರು
ವಿಜಯ ಸಂ. ಯುಗಾದಿ
೧೬–೩–೫೩

H.M. ಶಂಕರನಾರಾಯಣರಾವ್

## ಎರಡನೆಯ ಮುದ್ರಣದ ಅರಿಕೆ

ಈ ಪುಟ್ಟ ಪುಸ್ತಕದ ಎರಡನೆಯ ಮುದ್ರಣದಲ್ಲಿ ಕೆಲವು ಸಣ್ಣಪುಟ್ಟ ಬದಲಾವಣೆಗಳನ್ನು ಮಾಡಿರುವುದಲ್ಲದೆ, ಕೆಲವು ಹೊಸ ಪದ್ಯಗಳನ್ನು ಸೇರಿಸಿದೆ. ಇದರಿಂದ ಗ್ರಂಥದ ಸ್ವಾರಸ್ಯ ಹೆಚ್ಚಿರುವುದೆಂದು ನಂಬಿರುತ್ತೇನೆ. ಈ ಅವಕಾಶವನ್ನು ಕಲ್ಪಿಸಿಕೊಟ್ಟ ಪ್ರಚಾರೋಪನ್ಯಾಸಮಾಲೆಯ ಕಾರ್ಯದರ್ಶಿಗಳೂ, ನನ್ನ ಮಿತ್ರರೂ ಆದ ಶ್ರೀ ತ. ಸು. ಶಾಮರಾಯರಿಗೆ ನಾನು ಕೃತಜ್ಞನಾಗಿದ್ದೇನೆ.

ಶಾರದಾ ಮಂದಿರ,
ರಾಮಯ್ಯರ್ ರಸ್ತೆ,
ಮೈಸೂರು
೧–೮–೧೯೫೮

H. M. ಶಂಕರನಾರಾಯಣರಾವ್

# ಜನಪದ ಮುಕ್ತಕಗಳು

## ಪೀಠಿಕೆ

### ಪರಂಪರೆ

ಕುಟ್ಟು ಬೀಸುವ ಹಾಡ ಯಾವಾಕಿ ಕಲಿಸ್ಯಾಳ
ಕೃಷ್ಣನ ತಂಗಿ ಸುಭದ್ರಿ ಕಲಿಸ್ಯಾಳ
ಕೃಷ್ಣನ ವ್ಯಾಲಿ ಪದಗೋಳ

ಯಾವುದೇ ಭಾಷೆಯಲ್ಲಾಗಲಿ ಅದರ ಸಾಹಿತ್ಯವನ್ನು ಬಹುವಾಗಿ ಬೆಳಸಿ ಜನಸಾಮಾನ್ಯರಲ್ಲಿ ಪ್ರಚಾರಕ್ಕೆ ತರುವವರು ವಿದ್ಯಾವಂತರು; ಪಂಡಿತರು. ಸಾವಿರ ವರುಷಕ್ಕೂ ಮೇಲ್ಪಟ್ಟು ಬೆಳೆದು ಬಂದಿರುವ ಕನ್ನಡ ಸಾಹಿತ್ಯವನ್ನೇ ಗಣನೆಗೆ ತೆಗೆದುಕೊಂಡರೆ, ಪಂಪ ರನ್ನ ಪೊನ್ನ ಜನ್ನ ಹರಿಹರ ರಾಘವಾಂಕ ಕುಮಾರವ್ಯಾಸ ಈ ಕವಿಗಳ ಹೆಸರುಗಳೇ ನಮ್ಮ ನೆನಪಿಗೆ ಬರುತ್ತವೆ; ಮನಸ್ಸಿನಲ್ಲಿ ಸುಳಿಯುತ್ತವೆ. ಮೇಲೆ ಹೇಳಿದ ಕವಿಗಳೆಲ್ಲ ಪ್ರತಿಭಾವಂತರಾದ ಕವಿಪಂಡಿತರು. ಇವರಲ್ಲಿ ಅನೇಕರಿಗೆ ರಾಜಾಶ್ರಯವಿತ್ತು. ಆದಕಾರಣ ಇವರು ರಾಜರ ಆಸ್ಥಾನದ ಕವಿಗಳ ಮೆಚ್ಚಿಗೆಗಾಗಿ ಪಾಂಡಿತ್ಯ ಪೂರ್ಣವಾದ ಕಾವ್ಯಗಳನ್ನು ರಚಿಸಬೇಕಾಯಿತು. ಇವರ ಕಾವ್ಯಗಳ ವಸ್ತು ಧಾರ್ಮಿಕ. ಕಾವ್ಯದ ಭಾಷೆ ಸಂಸ್ಕೃತದಿಂದ ಕೂಡಿದ ಹಳಗನ್ನಡ; ಛಂದಸ್ಸು ಸಂಸ್ಕೃತದ ಛಂದಸ್ಸು. ಕವಿ ಸಮಯದಿಂದ ಕೂಡಿ ಕೃತಕತೆಗೆ ಎಡೆಗೊಟ್ಟ ಈ ಕಾವ್ಯಗಳು ವಸ್ತು

ಭಾಷೆ ಭಾವ ಅಲಂಕಾರ ಛಂದಸ್ಸು ಈ ವಿಷಯಗಳಲ್ಲಿ ಒಂದರ ಪಡಿಯಚ್ಚು ಮತ್ತೊಂದು. ಸರ್ವಜ್ಞ ಪುರಂದರ ದಾಸರು ಇಂತಹ ಒಬ್ಬಿಬ್ಬರನ್ನು ಬಿಟ್ಟರೆ ಕನ್ನಡ ಕಾವ್ಯಗಳನ್ನು ಅರ್ಥಮಾಡಿಕೊಳ್ಳಲು ವಿಶೇಷವಾದ ಪಾಂಡಿತ್ಯ ಸಹೃದಯನಿಗೆ ಬೇಕಾಗುತ್ತದೆ. ಹೀಗಾಗಿ ಈ ಪಾಂಡಿತ್ಯಪ್ರಧಾನವಾದ ಕಾವ್ಯಗಳು ರಾಜಾಸ್ಥಾನದಲ್ಲಿ ಉಳಿದು ಜನಸಾಮಾನ್ಯರ ಬಳಿ ಸುಳಿಯದ ಕಾರಣ ಸಾಮಾನ್ಯಜನರು ಈ ಸಾಹಿತ್ಯದ ಸವಿಯಿಂದ ವಂಚಿತರಾದರು.

ಆದರೆ ಹಿಂದಿನಿಂದಲೂ ಈ ಪರಿಸ್ಥಿತಿ ಇರಲಿಲ್ಲ. ಒಡು ಕನ್ನು ತಿದ್ದಿ ಮನಸ್ಸನ್ನು ಸಂಸ್ಕಾರಗೊಳಿಸಿಕೊಳ್ಳುವುದಕ್ಕಾಗಿ ಜನಸಾಮಾನ್ಯರು ಪಂಡಿತಕವಿಗಳಿಂದ ರಚಿತವಾದ ಕಾವ್ಯಗಳನ್ನೇ ನೆಚ್ಚಿಕೊಂಡಿರಲಿಲ್ಲ. ವಿದ್ಯಾವಂತರು ಕಣ್ಣಿನಿಂದ ಸಂಸ್ಕಾರಪಡೆದರೆ ಸಾಮಾನ್ಯಜನರು ಕಿವಿಯಿಂದ ಸಂಸ್ಕಾರ ಪಡೆಯುತ್ತಾರೆ. ಪುರಾಣಶ್ರವಣ ಹರಿಕಥೆ ಇವೇ ಮೊದಲಾದ ಸಾಧನಗಳಿಂದ ರಾಮಾಯಣ ಮಹಾಭಾರತ ಇವೇ ಮೊದಲಾದ ಮಹಾಗ್ರಂಥದಲ್ಲಿ ಅಡಕವಾಗಿದ್ದ ಭಾರತೀಯ ಸಂಸ್ಕೃತಿ ಮನೆಮನೆಯನ್ನು ಸೇರುತ್ತಿತ್ತು. ಅಲ್ಲದೆ ಸುಗ್ಗಿಯ ಕಾಲ, ಹಬ್ಬ ಹರಿದಿನಗಳು, ಮದುವೆ, ಇವೇ ಮೊದಲಾದ ಸಂದರ್ಭದಲ್ಲಿ ಜನತೆಯ ಕವಿಗಳು ಹಾಡುಗಳನ್ನು ಕಟ್ಟಿ ಅವುಗಳ ಮೂಲಕ ತಮ್ಮ ಬಾಳಿನ ಸುಖದುಃಖಗಳನ್ನು ತೋಡಿಕೊಳ್ಳುತ್ತಿದ್ದರು. ಹೀಗೆ ಹಾಡುಗಳನ್ನು ಕಟ್ಟಿ ಹೇಳುತ್ತಿದ್ದುದರಿಂದ ಆಗುತ್ತಿದ್ದ ಪ್ರಯೋಜನವನ್ನು ಇಲ್ಲಿ ಉಲ್ಲೇಖಿಸ

ಬಹುದು. ತಂಪಾದ ಹುಣ್ಣಿಮೆಯ ಚಂದ್ರನ ಬೆಳುದಿಂಗುಳಿನಲ್ಲಿ ಎತ್ತಿನ ಗಾಡಿಗಳಲ್ಲಿ ಊರಿಂದೂರಿಗೆ ಪ್ರಯಾಣಮಾಡುತ್ತಿದ್ದಾಗ, ಗಾಡಿ ಹೊಡೆಯುವವರು ಪಂಥಕಟ್ಟಿ ಹಾಡುಗಳನ್ನು ಹೇಳುತ್ತಿದುದರಿಂದ ಬೇಸರವಿಲ್ಲದೆ ದಾರಿ ಸವೆಯುತ್ತಿತ್ತು. ನಿಶ್ಶಬ್ದವಾದ ಆದರೆ ಉಲ್ಲಾಸಕರವಾದ ತಂಗಾಳಿ ಬೀಸುವ ಬೆಳಗಿನ ಜಾವದಲ್ಲಿ ದನಿಯೆತ್ತಿ ಹಾಡುಗಳನ್ನು ಹೇಳುತ್ತ ಹೆಣ್ಣುಮಕ್ಕಳು ಆಯಾಸವಿಲ್ಲದೆ ಹಿಟ್ಟನ್ನು ಬೀಸುತ್ತಿದ್ದರು. ಹಾಗೆಯೇ ಮಗುವನ್ನು ತೂಗುವಾಗ, ಮದುವೆಗಾಗಿ ನಲಿಯುವಾಗ, ಸಾವಿಗಾಗಿ ಅಳುವಾಗ, ಸಾಮುಕಾಳಗ ಜೇಟಿ ಇವುಗಳನ್ನು ನಡೆಸುವಾಗ ಹಾಡುಗಳನ್ನು ಹಾಡಿ ಮನಸ್ಸಿನ ಭಾರವನ್ನು ಇಳಿಸಿಕೊಳ್ಳುತ್ತಿದ್ದರು. ಜನಸಾಮಾನ್ಯರು ರಚಿಸಿದ ಈ ಸಾಹಿತ್ಯವೇ ಜನಪದ ಸಾಹಿತ್ಯ.

ಹಿತ್ತಲಗಿಡ ಮದ್ದಲ್ಲ ಎಂಬ ನಾಣ್ಣುಡಿಯನ್ನು ನಾವೆಲ್ಲರೂ ಕೇಳಿದ್ದೇವೆ. ಜನಪದ ಸಾಹಿತ್ಯವೆಂದರೆ ಅವಿದ್ಯಾವಂತರು ರಚಿಸಿದ ಸಾಹಿತ್ಯವೆಂದು ಯಾರೂ ಅದನ್ನು ತೆಗಳಬೇಕಾಗಿಲ್ಲ. ಹೀಗೆಂದ ಮಾತ್ರಕ್ಕೆ ಆ ಸಾಹಿತ್ಯವೆಲ್ಲ ಉತ್ತಮೋತ್ತಮವಾದುದೆಂದು ಯಾರೂ ಭಾವಿಸಬೇಕಾಗಿಲ್ಲ. ಆದರೆ ಆ ಸಾಹಿತ್ಯದಲ್ಲೂ ನಮ್ಮ ಪರಿಶೀಲನೆಗೆ ಯೋಗ್ಯವಾದ ಅಂಶವುಂಟೆಂಬುದೇ ಇಲ್ಲಿ ಪ್ರಕೃತವಾದ ವಿಷಯ. ಕೆಲವು ಹಾಡುಗಳನ್ನು ಓದಿದಾಗಲಂತೂ ಶಾರದೆಯೇ ಆ ಕವಿಗಳ ಬಾಯಲ್ಲಿ ನಿಂತು ನುಡಿಸುತ್ತಿದ್ದಾಳೆಂದು ನಮಗೆ ಸ್ಪಷ್ಟವಾಗುತ್ತದೆ. ಈ ಪದಗಳ ಸ್ವಾರಸ್ಯ ಎಷ್ಟೋ ವೇಳೆ ಹೆಸರುವಾಸಿಯಾದ ಕವಿಗಳು ರಚಿಸಿರುವ

ಪದ್ಯಗಳ ಸ್ವಾರಸ್ಯಕ್ಕೆ ಯಾವ ರೀತಿಯಿಂದಲೂ ಕಡಮೆಯಾಗಿರುವುದಿಲ್ಲ. ಆದ್ದರಿಂದಲೇ ವಿದ್ವಾಂಸರು ಕೂಡ ಇವುಗಳ ಸೊಗಸಿಗೆ ಮರುಳಾಗಿದ್ದಾರೆ.

ಇಷ್ಟು ಸೊಗಸಾದ ಇಂಪಾದ ಅದರಲ್ಲಿಯೂ ವಿಶೇಷವಾಗಿ ಹೆಣ್ಣುಮಕ್ಕಳೇ ಕಟ್ಟಿರುವ ಹಾಡುಗಳಲ್ಲಿ ಬಿಡಿಪದ್ಯಗಳು ಮಾತ್ರವಲ್ಲದೆ ಬಗೆಬಗೆಯ ಛಂದಸ್ಸುಗಳಲ್ಲಿ ರಚಿತವಾದ ಕಥೆಗಳಿವೆ; ನೀಳ್ಗತೆಗಳಿವೆ. ನಾಡಿನ ಇತಿಹಾಸಕ್ಕೆ ಸಂಬಂಧಿಸಿದ ಸಂಗತಿಗಳಿವೆ. ಕೋಲಾಟ ಕೊರವಂಜಿಯ ಪದಗಳಿವೆ; ಸುಗ್ಗಿಯ ಕುಣಿತದ ಹಾಡುಗಳಿವೆ. ಹೆಚ್ಚೇನು? ಒಂದು ಮಾತಿನಲ್ಲಿ ಹೇಳಬಹುದಾದರೆ ಈ ಜನಪದ ಸಾಹಿತ್ಯದಲ್ಲಿ ವೈವಿಧ್ಯಕ್ಕೆ ಮಿತಿಯೇ ಇಲ್ಲ. ಈ ನಾಡಕವಿಗಳು ತಮ್ಮ ಅನುಭವಕ್ಕೆ ಬಂದ ಸಂಗತಿಗಳನ್ನು ಇನಿದಾದ ಕನ್ನಡ ನುಡಿಯಲ್ಲಿ, ಹಾಗೂ ಕನ್ನಡ ಛಂದಸ್ಸಿನಲ್ಲಿ, ಸಹಜವಾದ ಅಲಂಕಾರಗಳಿಂದ ಕೂಡಿ ನಿರೂಪಿಸುವುದನ್ನು ನೋಡಿದರೆ ಆಶ್ಚರ್ಯವೆನಿಸುತ್ತದೆ. ಬರವಣಿಗೆಗೆ ಸಿಲುಕದೆ ಬಾಯಿಂದ ಬಾಯಿಗೆ ಅನೇಕ ಪಾಠಗಳನ್ನು ಒಳಗೊಂಡು ಬಂದಿರುವ ಈ ಹಾಡುಗಳು ತಮ್ಮ ಒಟ್ಟು ಕಟ್ಟಡ ಒಂದೇ ಆಗಿದ್ದರೂ ಇನ್ನೂ ಉಳಿದುಕೊಂಡು ಬಂದಿರುವುದರಿಂದ ಇವುಗಳನ್ನು ಓದುವ ರಸಿಕರಿಗೆ ಒಂದು ಹಬ್ಬವೆನಿಸಿದೆ. ವಿದ್ಯೆ ಬೆಳೆದಂತೆಲ್ಲ, ಪಟ್ಟಣದ ನಾಗರಿಕತೆ ಬೆಳೆದು ಅದಕ್ಕೆ ಹಳ್ಳಿಗರು ಬಲಿಯಾದಂತೆಲ್ಲ ಈ 'ಪಳಮೆ' ಗಳು ಹಳೆಯ ತಲೆಗಳೊಂದಿಗೆ ಕಣ್ಮರೆಯಾಗುತ್ತಿವೆ. ಇದು ತುಂಬ ವ್ಯಸನಕರವಾದ ಸಂಗತಿ.

ಈ ಪದ್ಯಗಳಲ್ಲಿ ಅಡಕವಾಗಿರುವ ಸ್ವಾರಸ್ಯವನ್ನು ತೋರಿಸಲು ಇಲ್ಲಿ ತ್ರಿಪದಿಯ ಛಂದಸ್ಸಿನಲ್ಲಿ ರಚಿತವಾಗಿರುವ ಕೆಲವು ಬಿಡಿಪದ್ಯಗಳನ್ನು ಎತ್ತಿಕೊಂಡಿದೆ. ನೇರವಾಗಿ ಈ ಕೆಲಸಕ್ಕೆ ಕೈಯಿಡುವುದಕ್ಕಿಂತ ಮುಂಚೆ ತ್ರಿಪದಿಯ ವಿಷಯವನ್ನು ಕುರಿತು ಒಂದೆರಡು ಮಾತುಗಳನ್ನಾಡುವುದು ಸೂಕ್ತವೆಂದು ತೋರುತ್ತದೆ. ಅಂಶಗಣದ ಕಟ್ಟಡದ ಮೇಲೆ ಕಟ್ಟಿರುವ ತ್ರಿಪದಿ ಅಚ್ಚ ಕನ್ನಡ ವೃತ್ತ. ಅದರ ಹೆಸರೇ ಸೂಚಿಸುವಂತೆ ಇದರಲ್ಲಿ ಮೂರು ಸಾಲುಗಳಿರುತ್ತವೆ. ಮೊದಲನೆಯ ಸಾಲಿನಲ್ಲಿ ನಾಲ್ಕು ವಿಷ್ಣುಗಣಗಳೂ, ಎರಡನೆಯ ಸಾಲಿನಲ್ಲಿ ಒಂದು ವಿಷ್ಣುಗಣವಾದ ಮೇಲೆ ಒಂದು ಬ್ರಹ್ಮಗಣವೂ ಆ ಬಳಿಕ ಎರಡು ವಿಷ್ಣುಗಣಗಳೂ, ಮೂರನೆಯ ಸಾಲಿನಲ್ಲಿ ಒಂದು ವಿಷ್ಣುಗಣವಾದ ಮೇಲೆ ಒಂದು ಬ್ರಹ್ಮಗಣ ಬಂದು ಆಮೇಲೆ ಮತ್ತೊಂದು ವಿಷ್ಣುಗಣ ಬರುತ್ತದೆ. ಆದರೆ ತ್ರಿಪದಿಯನ್ನು ಹಾಡುವಾಗ ಎರಡನೆಯ ಸಾಲನ್ನು ಮುಕ್ಕಾಲು ಭಾಗ ಹಾಡಿ ನಿಲ್ಲಿಸಿ, ಮತ್ತೆ ಇನ್ನೊಂದು ಬಾರಿ ಆ ಸಾಲನ್ನು ಪುನರಾವೃತ್ತಿ ಮಾಡಿ ಮುಂದಕ್ಕೆ ಹೋಗುವುದು ಪದ್ಧತಿ. ಉದಾಹರಣೆಯೊಂದರಿಂದ ಈ ಅಂಶವನ್ನು ಸ್ಪಷ್ಟಪಡಿಸಬಹುದು.

ಕ. ನ್ನ. ಡಿ.। ಕೈ. ತ. ಪ್ಪಿ.। ಹ. ನ್ನೆ. *ರ್ದ್ಧ.। ಚೂ. ರಾ. ಗಿ.।
ಹೆ. ಣ್ಣಿ. ನ.। ಮನ. ಸು.। ಎರ. ಡಾ. ಗಿ.। ದಾ. ಳಿಂ. ಬೆ.।
ಹ. ಣ್ಣಾ. ದ.। ರೇ. ನು.। ಫಲ. ವಿ. ಲ್ಲ.॥

(ಚುಕ್ಕಿಗಳು ಅಂಶವನ್ನೂ, ಗೆರೆಗಳು ಗಣವನ್ನೂ ಸೂಚಿಸುತ್ತವೆ. ಮೊದಲನೆಯ ಸಾಲಿನಲ್ಲಿ ಬಂದಿರುವ ಯತಿ, ಒಳಪ್ರಾಸವನ್ನು ಗಮನಿಸಿ. ಆರು ಹನ್ನೊಂದನೆಯ ಸ್ಥಾನದಲ್ಲಿ ಬ್ರಹ್ಮಗಣ ಬಂದಿದೆ.)

ಇದನ್ನು

ಕನ್ನಡಿ ಕೈತಪ್ಪಿ ಹನ್ನೆರ್ಡು ಚೂರಾಗಿ
ಹೆಣ್ಣಿನ ಮನಸು ಎರಡಾಗಿ
ಹೆಣ್ಣಿನ ಮನಸು ಎರಡಾಗಿ—ದಾಳಿಂಬೆ
ಹಣ್ಣಾದರೇನು ಫಲವಿಲ್ಲ

ಎಂದು ಹಾಡಿಕೊಳ್ಳಬೇಕು. ಎರಡನೆಯ ಸಾಲನ್ನು ಓದುವಾಗ ನಿಲ್ಲಿಸುವ ಸ್ಥಳವನ್ನು ಒಂದು ಚಿಕ್ಕ ಗೀಟಿನಿಂದ ತೋರಿಸಿದೆ. ಕೆಲವು ಕಡೆ ಎರಡನೆಯ ಸಾಲನ್ನು ಮತ್ತೆ ಹೇಳಿಕೊಳ್ಳುವುದಿಲ್ಲ.

ಈ ಸಂದರ್ಭದಲ್ಲಿ ಇನ್ನೆರಡು ಅಂಶಗಳನ್ನು ಇಲ್ಲಿ ನಿರೂಪಿಸಬೇಕು. ಅದೇನೆಂದರೆ ಈ ಪದ್ಯಗಳಲ್ಲಿ ಅನೇಕಕಡೆ ಹಾಡಿಗೆ

---

* ಅಚ್ಚ ಕನ್ನಡವೃತ್ತಗಳನ್ನು ಬ್ರಹ್ಮ, ವಿಷ್ಣು, ರುದ್ರಗಣಗಳಿಂದ ರಚಿಸುತ್ತಾರೆ. ಬ್ರಹ್ಮಗಣದಲ್ಲಿ ೪, ವಿಷ್ಣುಗಣದಲ್ಲಿ ೮, ರುದ್ರಗಣದಲ್ಲಿ ೧೬ ಬಗೆಗಳುಂಟು. ಈ ಗಣಗಳಲ್ಲಿ ಮೂಲಾಂಶ ಒಂದು ಗುರು. (ಲಘುವಲ್ಲ). ಇದಕ್ಕೆ ಒಂದು, ಎರಡು, ಮೂರು ಗುರುಗಳು ಸೇರಿ ಮೇಲೆ ಹೇಳಿದ ಮೂರು ಗಣಗಳಾಗುವುವು. ಎಂದರೆ ಬ್ರಹ್ಮಗಣಕ್ಕೆ ೨

ಹೊಂದಿಕೊಳ್ಳುವಂತೆ ಬೇಕಾದಕಡೆ ಶಬ್ದಸ್ವರೂಪಕ್ಕೂ ಅರ್ಥ ಸ್ಫೂರ್ತಿಗೂ ಗಮನಕೊಟ್ಟು ಗುರುವನ್ನು ಎಳೆದು ಗುರು ಮಾಡಿ, ಗುರುವನ್ನು ಕುಗ್ಗಿಸಿ ಲಘುಮಾಡಿ ಹಾಡಿಕೊಳ್ಳ ಬೇಕಾಗುತ್ತದೆ. ಉದಾಹರಣೆಗೆ 'ಅಡಗಿಯ ಮನಿಯಾಗೆ ಮಡದಿಯ ಸುಳಿವಿಲ್ಲ' ಎಂಬ ಸಾಲನ್ನು 'ಅಡಗೀಯ ಮನಿ ಯಾಗೆ ಮಡದೀಯ ಸುಳಿವಿಲ್ಲ' ಎಂದೂ, 'ಬಂಗಾರದ ಪಾವ' ಎಂಬುದನ್ನೂ 'ಬಂಗಾರದ್ಪಾವ' ಎಂದೂ ಹೇಳ ಬೇಕು. ಒಟ್ಟಿನಲ್ಲಿ 'ಸಂಗತಿಹಾಕಿ ಧಾಟಿ ಕೂಡಿಬಂದರೆ ಸರಿ.' ಕೆಲವು ಹಾಡುಗಳನ್ನು ಹಾಡಿಕೊಂಡಮೇಲೆ ಇವು ಗಳನ್ನು ಹಾಡಿಕೊಳ್ಳುವ ಕ್ರಮ ತಾನಾಗಿಯೇ ಅಭ್ಯಾಸವಾಗು ತ್ತದೆ.

---

ಅಂಶ, ವಿಷ್ಣುಗಣಕ್ಕೆ ೩ ಅಂಶ, ರುದ್ರಗಣಕ್ಕೆ ೪ ಅಂಶಗಳಾಗುತ್ತವೆ. ಗಣಕ್ಕೆ ಮೂಲಾಂಶವಾದ ಗುರುವೇ ಗಣವಾಗಲಾರದು. ಆದರೆ ಪಾದಾಂತದಲ್ಲಿ ಗಣಸ್ಥಾನದಲ್ಲಿ ನಿಲ್ಲಬಹುದು. ಮೊದಲನೆಯ ಅಂಶಕ್ಕೆ ಮಾತ್ರ ಎರಡು ಲಘುಗಳನ್ನು ಹಾಕಬಹುದು. ಉಳಿದ ಅಂಶಗಳ ಗುರುವಿಗೆ ಬದಲಾಗಿ ಲಘು ಬರಬಹುದು. ಹೀಗಾದ ಪಕ್ಷದಲ್ಲಿ ಬ್ರಹ್ಮಗಣದಲ್ಲಿ (೧) —.— (೨) ∪∪·— (೩) —· ∪ (೪) ∪∪ · ∪ ಈ ನಾಲ್ಕು ಗಣಗಳೂ, ವಿಷ್ಣುಗಣದಲ್ಲಿ (೧) —.—.— (೨) —.—. ∪ (೩) ∪∪.—.— (೪) ∪∪ .—. ∪ (೫) —. ∪ .— (೬) —. ∪ . ∪ (೭) ∪∪ · ∪ ·— (೮) ∪∪ . ∪ . ∪ ಈ ಎಂಟು ಗಣಗಳೂ ಆಗು ತ್ತವೆ. ಹೆಚ್ಚಿನ ವಿವರಗಳಿಗೆ ಕನ್ನಡ ಕೈಪಿಡಿ, ಒಂದನೆಯ ಭಾಗವನ್ನು ನೋಡಿ (ಮೂರನೆಯ ಮುದ್ರಣ.)

ಇಲ್ಲಿ ಆಯ್ದು ಎತ್ತಿಕೊಟ್ಟಿರುವ ಮುಕ್ತಕಗಳಲ್ಲಿ ಬಹು ಭಾಗ ತುಂಗಭದ್ರೆಯ ಆಚೆಯ ದಡದ ಪ್ರದೇಶದಲ್ಲಿ ಪ್ರಚಾರದಲ್ಲಿರತಕ್ಕವು. ಆದ್ದರಿಂದ ಈ ಹಾಡುಗಳ ಭಾಷೆ ಸ್ವಲ್ಪಮಟ್ಟಿಗೆ ವಿಚಿತ್ರವೆನಿಸಿದರೂ ಅಭ್ಯಾಸಬಲದಿಂದ ವಾಚಕರಿಗೆ ಒಗ್ಗಿ ಹೋಗುತ್ತದೆ.

ಈ ಪದ್ಯಗಳ ಸ್ವಾರಸ್ಯವನ್ನು ವಿವರಿಸುವುದಕ್ಕಿಂತ ಮುಂಚೆ ಮುಕ್ತಕಗಳ ಸ್ವರೂಪವನ್ನು ಕುರಿತು ನಾಲ್ಕು ಮಾತುಗಳನ್ನಿಲ್ಲಿ ಹೇಳಿದರೆ ಅಪ್ರಕೃತವೆನಿಸಲಾರದು.

## ಮುಕ್ತಕ

ಜನಪದ ಮುಕ್ತಕಗಳ ಸ್ವಾರಸ್ಯವನ್ನು ವಿವರಿಸುವುದಕ್ಕಿಂತ ಮುಂಚೆ ಮುಕ್ತಕವೆಂಬ ಮಾತಿನ ಅರ್ಥವನ್ನು ವಿಶದಪಡಿಸುವುದು ಉತ್ತಮವೆಂದು ತೋರುತ್ತದೆ. ಸಂಸ್ಕೃತಸಾಹಿತ್ಯದಲ್ಲಿ ಪ್ರಖ್ಯಾತವಾಗಿರುವ ಮುಕ್ತಕವೆಂಬ ಪದ್ಯಕಾವ್ಯಭೇದವನ್ನು ಭಾವಗೀತೆಯೆಂದೇ ನಾವು ಪರಿಗಣಿಸಬಹುದು. ಸ್ವಯಂಪೂರ್ಣವಾದ ಬಿಡಿಪದ್ಯವನ್ನು ಮುಕ್ತಕವೆಂದು ಕರೆಯುತ್ತಾರೆ. ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಇದನ್ನು ಕಿರುಕಾವ್ಯವೆಂದು ಕರೆದರೂ ತಪ್ಪಾಗಲಾರದು. ಭಾವದ ಪ್ರೇರಣೆಯುಂಟಾದಾಗ ಕವಿ ಸಂದರ್ಭಕ್ಕೆ ತಕ್ಕಂತೆ ಈ ಪದ್ಯಗಳನ್ನು ರಚಿಸಬಹುದು. ಹಾಗಲ್ಲದೆ ಈಗ ಪ್ರಚಾರದಲ್ಲಿರುವ ಅನೇಕ ಮುಕ್ತಕಗಳು ಮಹಾಕಾವ್ಯಗಳ ಒಂದು ಭಾಗವಾಗಿದ್ದು, ರಸಿಕರಿಗೊಂದು ಪಟ್ಟೆನಿಸಲು ಬೇರೆಯಾಗಿ ನಿಂತು ಈಗ ಸುಭಾಷಿತ ಗ್ರಂಥ

ಗಳಲ್ಲಿ ಶಾಶ್ವತವಾದ ಸ್ಥಾನವನ್ನು ಪಡೆದಿವೆ. ಇವುಗಳನ್ನು ರಚಿಸಿದ ಸನ್ನಿವೇಶ ಏನೇ ಇರಲಿ ಇವುಗಳ ರಮ್ಯತೆಗೆ ಯಾರು ತಾನೆ ಮನಸೋಲರು? 'ಮುಕ್ತಕ' ಎಂಬ ಮಾತಿನಲ್ಲಿ ಮುತ್ತು ಎಂಬ ಅರ್ಥದ ಸೂಚನೆಯೂ ಇರುವಂತೆ ತೋರುತ್ತದೆ. ಮುತ್ತಿನ ಆಕಾರ ಕಿರಿದು; ಅದು ನಯವಾದದ್ದು; ಕಾಂತಿ ಯುಕ್ತವಾದುದು. ಅದು ಸ್ವಯಂಪ್ರಕಾಶಮಾನವಾಗಿರುವುದಲ್ಲದೆ ತನ್ನ ಸುತ್ತಲ ಪ್ರದೇಶವನ್ನು ಬೆಳಗುತ್ತದೆ. ಬಿಡಿಮುತ್ತುಗಳನ್ನು ಸರವಾಗಿ ಕಟ್ಟಿದರೂ ಅವುಗಳ ಕಾಂತಿ ಇಮ್ಮಡಿಸಿ ಆ ಹಾರವನ್ನು ಧರಿಸಿದವರ ಚೆಲುವೂ ಮಿಗಿಲಾಗುತ್ತದೆ; ಮುಕ್ತಕಗಳನ್ನು ಓದಿದ ರಸಿಕರ ಮನಸ್ಸು ಅವುಗಳ ರಸಾಸ್ವಾದನೆಯಿಂದ ಉಲ್ಲಾಸಗೊಳ್ಳುವಂತೆ.

ಇಷ್ಟರಮಟ್ಟಿಗೆ ಸಹೃದಯರ ಮನಸ್ಸನ್ನು ಸೆಳೆದಿರುವ ಈ ಮುಕ್ತಕಗಳ ಲಕ್ಷಣವನ್ನು ಸ್ಥೂಲವಾಗಿ ಹೀಗೆ ಸಂಗ್ರಹಿಸಬಹುದು. ಮೊದಲನೆಯದಾಗಿ ಈ ಪದ್ಯಗಳ ಆಕಾರ ತುಂಬ ಕಿರಿದು. ಕವಿ ಈ ಬಿಡಿಪದ್ಯಗಳ ಸ್ವಯಂಪೂರ್ಣತೆಯ ಕಡೆಗೆ ತನ್ನ ಮನಸ್ಸನ್ನು ಕೊಡಬೇಕು. ಈ ಪದ್ಯಗಳ ಕರ್ತೃ ತನಗಿರುವ ಅಲ್ಪಾವಕಾಶದಲ್ಲಿ ಎಂದರೆ ನಾಲ್ಕು ಸಾಲುಗಳ ಪರಿಮಿತಿಯಲ್ಲಿ ಒಂದು ಸನ್ನಿವೇಶವನ್ನೋ, ಮುಖ್ಯವಾದ ಭಾವವನ್ನೋ ಇಲ್ಲವೆ ಬೆಂದ ಬಾಳಿಗೆ ಬೆಳಕನ್ನು ಬೀರುವ ಮಹತ್ವಪೂರ್ಣವಾದ ಜೀವನಾನುಭವವನ್ನೋ ನಿರೂಪಿಸಬೇಕಾಗುತ್ತದೆ. ಎರಡನೆಯದಾಗಿ ವರ್ಣನೆಗಾಗಲೀ ವಿಷಯ ವಿಸ್ತಾರಕ್ಕಾಗಲೀ ಇಲ್ಲಿ ಹೆಚ್ಚು ಅವಕಾಶವಿಲ್ಲ. 'ಒಳ್ಳೊಳ್ಳೆ

ಮೀನ ಗರಿ ತೆಗೆದು ಆಡ್ಯಾವ ಗರತಿ ಗಂಗಮ್ಮನ ಉಡಿಯಾಗ' ಎಂಬ ವರ್ಣನೆಗಳು ಬಂದರೆ ಅವು ಅಪರೂಪ. ಹೆಚ್ಚೇನು? ಕವಿ ಇಲ್ಲಿ ಒಂದು ಮಾತನ್ನೂ ವ್ಯರ್ಥಮಾಡು ವಂತಿಲ್ಲ. ಮೂರನೆಯದಾಗಿ ವಿಷಯನಿರೂಪಣೆಗಿಂತ ಸೂಚನೆಗೇ ಇಲ್ಲಿ ಹೆಚ್ಚು ಪ್ರಾಧಾನ್ಯ. ಈ ಬಿಡಿಪದ್ಯಗಳ ವಿಷಯದಲ್ಲಿ ಸಹೃದಯನ ಹೊಣೆಯೂ ಒಂದು ಉಂಟು. ಈ ಮುಕ್ತಕಗಳ ಸಂಪೂರ್ಣವಾದ ಸ್ವಾರಸ್ಯವನ್ನು ಅನುಭವಿಸಬೇಕಾದರೆ, ಸಹೃದಯನಾದವನು ಕವಿಯ ಕಲ್ಪನೆಯೊಂದಿಗೆ ತನ್ನ ಕಲ್ಪನೆಯ ರೆಕ್ಕೆಯನ್ನು ಹಾರಬಿಟ್ಟು ಅವುಗಳ ಸುತ್ತಲೂ ಒಂದು ಉಚಿತವಾದ ಆವರಣವನ್ನು ಕಲ್ಪಿಸಿಕೊಳ್ಳಬೇಕು. ಆಗ ಮಾತ್ರ ಮುಕ್ತಕಗಳ ಸ್ವಾರಸ್ಯ ಮನದಟ್ಟಾಗುತ್ತದೆ; ಈ ಎರಡಂಗುಲದ ದಂತದ ಮೇಲೆ ಕೆತ್ತಿರುವ ಚಿತ್ರದ ಅಪೂರ್ವ ಸತ್ವ ನಮಗೆ ಮನವರಿಕೆಯಾಗುತ್ತದೆ. ಒಂದೆರಡು ಉದಾಹರಣೆಗಳಿಂದ ಈ ಅಂಶವನ್ನು ಸ್ಫುಟಗೊಳಿಸಬಹುದು.

ಗೋದಾವರೀನದಿಯ ತೀರದಲ್ಲಿದ್ದ ವನವೊಂದು ಧಾರ್ಮಿಕನೊಬ್ಬನ ಓಡಾಟದ ಸ್ಥಳವಾಗಿತ್ತು. ಅವನ ಸಂಚಾರ ತರುಣಿಯೊಬ್ಬಳ ಪ್ರಣಯಕ್ಕೆ, ವಿಹಾರಕ್ಕೆ ತುಂಬ ಅಡ್ಡಿಯನ್ನು ಉಂಟುಮಾಡುತ್ತಿತ್ತು. ವೇದಾಭ್ಯಾಸದಿಂದ ಜಡನಾದ ಆ ಮುದಿಗೊಡ್ಡಿಗೆ, ಧಾರ್ಮಿಕನಿಗೆ ಈ ಯುವಕ ಯುವತಿಯರ ಪ್ರಣಯಪ್ರಸಂಗ ಹೇಗೆ ತಾನೆ ಅರ್ಥವಾದೀತು? ಆಕೆ ಆ ಧಾರ್ಮಿಕನಿಗೆ ಸನ್ನೆ ಮಾಡಿದಳು, ಸೂಚನೆ ಕೊಟ್ಟಳು; ಅವು ಅವನಿಗೆ ಅರ್ಥವಾಗಲಿಲ್ಲ. ಕೊನೆಗೆ ನಾಯಿಯಿಂದ ಅವನ

ಸಂಚಾರಕ್ಕೆ ಅಡ್ಡಿಪಡಿಸಿದಳು; ಆದರೂ ಆ ಧಾರ್ಮಿಕನು ಹೋಗದಿರಲು ಬೇಸತ್ತ ತರುಣಿ ಕೊನೆಗೆ ಅವನ ಮೇಲೆ ಈ ವಾಗ್ಬಾಣವನ್ನು ಎಸೆದಳು—

ಸಡೆದಾಡು ಧಾರ್ಮಿಕನೆ ನಿಶ್ಶಂಕೆಯಿಂದಿನ್ನು
ಹತವಾದುದಾ ನೀಚ ಶುನಕ ತಾನಿಂದು!
ಗೋದಾವರೀ ನದಿಯ ತಡಿಯೆಡೆಯುಲಿಡಿಕಿರಿದ
ಹೊದರೊಳಿಹ ದೃಪ್ತಕೇಸರಿಯ ಕೈಯಿಂದ

ಧಾರ್ಮಿಕನ ಧರ್ಮಕಾರ್ಯಕ್ಕೆ ಅಡ್ಡಿತರುತ್ತಿದ್ದ 'ನೀಚ ಶುನಕ'ವೇನೋ ಸಾವನ್ನಪ್ಪಿತು. ಆದರೆ ಯುವಕ ಯುವತಿಯರ ಪ್ರಣಯಕ್ಕೆ ಅಡ್ಡಿತರುತ್ತಿದ್ದ ಧಾರ್ಮಿಕನಿಗೆ 'ನೀಚ ಶುನಕ'ನಿಗೆ ಬದಲಾಗಿ 'ದೃಪ್ತಕೇಸರಿಯ' ಭಯ ಕಾಣಿಸಿಕೊಂಡಿತು. ಹೀಗಿರಲು ಅವನು ನಿಶ್ಶಂಕೆಯಿಂದ ಓಡಾಡಲು ಸಾಧ್ಯವೇ? ಅವನು ಆ ಸ್ಥಳದಿಂದ ಓಟಕಿತ್ತಿರಬೇಕಲ್ಲವೇ?

ಈ ಮುಕ್ತಕಗಳ ವಿಷಯ ಅನಂತ; ವೈವಿಧ್ಯ ವಿಪುಲ. ಆದರೂ ಪ್ರಣಯವೇ ಈ ಮುಕ್ತಕಗಳ ಮುಖ್ಯ ವಿಷಯವೆಂಬುದನ್ನು ನಾವು ಗಮನಿಸಬೇಕು. ಹೀಗಿರುವುದು ಸಹಜವೂ ಉಚಿತವೂ ಆಗಿದೆ. ಮನುಷ್ಯನ ಬಾಳಿನ ಬಹುಭಾಗವನ್ನು ಪ್ರೇಮವೇ ಮುಸುಕಿದೆ. ಪ್ರೇಮದ ಪ್ರಪಂಚ ಹೂಬಿಸಿಲಿನ ಹೊಂಗನಸುಗಳಿಂದ ಮೊದಲಾಗಿ, ಒಲಿದವರು ಕೂಡಿ ಬೇರೆಯಾಗುವವರೆಗೂ ಪ್ರಣಯಿಗಳ ಮನಸ್ಸಿನಲ್ಲಿ ಮೂಡುವ ನಾನಾ ಭಾವಗಳನ್ನೂ, ಅವರ ಆಸೆ, ಅಭಿಲಾಷೆ, ನಿರೀಕ್ಷೆ, ವಿರಹ, ಆಕಾಂಕ್ಷೆಗಳನ್ನೂ ಈ ಮುಕ್ತಕಗಳು ಶುಚಿಯಾದ

ವಾಣಿಯಲ್ಲಿ ವಿಸ್ಮಯೋಪಕವಾದ ರೀತಿಯಲ್ಲಿ ಚಿತ್ರಿಸುತ್ತವೆ. ಸಂಸ್ಕೃತದಲ್ಲಿ ರಚಿತವಾಗಿರುವ ಅಮರುಶತಕದ ಒಂದೊಂದು ಪದ್ಯವೂ ಈ ಮಾತಿನ ಸತ್ಯವನ್ನು ಸ್ಥಾಪಿಸುತ್ತವೆ.

ಈ ಮುಕ್ತಕಗಳ ಇನ್ನೊಂದು ಪ್ರಧಾನ ವಿಷಯ ಅನ್ಯೋಕ್ತಿ. ಪಶುಪಕ್ಷಿಗಳ ಮೂಲಕ ಮನುಷ್ಯನಲ್ಲಿರುವ ಹುಳುಕುಗಳನ್ನು ಬಯಲಿಗೆಳೆಯುವುದೇ ಈ ಉಕ್ತಿಗಳ ಸ್ವಾರಸ್ಯ. ಕತ್ತೆ ಅವರ ಹೀನ ಜಾತಿಗೂ ಮೌಢ್ಯಕ್ಕೂ ಹೆಸರಾದುದಲ್ಲವೆ? ಅದರ ಮೂಲಕ ಒಂದು ರಾಜ್ಯದ ಯಂತ್ರವನ್ನೇ ಟೀಕಿಸುವ ಈ ಅನ್ಯೋಕ್ತಿ ಎಷ್ಟು ಸ್ವಾರಸ್ಯವಾದುದು!

ರೇ ರೇ ರಾಸಭ ವಸ್ತ್ರಭಾರವಹನಾತ್ಕುಗ್ರಾಸಮಶ್ನಾಸಿ ಕಿಂ
ರಾಜಾಶ್ವಾವಸಥಂ ಪ್ರಯಾಹಿ ಚಣಕಾಭ್ಯೂಷಾನ್ಸುಖಂ ಭಕ್ಷಯ
ಸರ್ವಾನ್ಪುಚ್ಛವತೋ ಹಯಾ ಇತಿ ವದಂತ್ಯತ್ರಾಧಿಕಾರೋಸ್ಥಿತಾ
ರಾಜಾ ತೈರುಪದಿಷ್ಟಮೇವ ಮನುತೇ ಸತ್ಯಂ ತಟಸ್ಥಾಃ ಪರೇ

ಎಲೆ ಎಲೆ ಕತ್ತೆ! ವಸ್ತ್ರಗಳ ಭಾರವನ್ನು ಹೊತ್ತು ಕೆಟ್ಟ ಕೂಳನ್ನೇಕೆ ತಿನ್ನುವೆ? ಅರಮನೆಯ ಲಾಯವನ್ನು ಹೊಕ್ಕು ಗುಗ್ಗರಿಯನ್ನು ಮೆಲ್ಲು. ಬಾಲವಿರುವ ಪ್ರಾಣಿಗಳನ್ನೆಲ್ಲ ಕುದುರೆಗಳೆಂದು ಅಲ್ಲಿನ ಅಧಿಕಾರಿಗಳು ತಿಳಿಯುತ್ತಾರೆ. ರಾಜನೂ ಅವರ ಮಾತನ್ನು ಸತ್ಯವೆಂದು ನಂಬುತ್ತಾನೆ. ತಮಗೇಕೆ ಈ ಚಿಂತೆಯೆಂದು ಮಿಕ್ಕವರು ತಟಸ್ಥರಾಗಿರುತ್ತಾರೆ.

ಕನ್ನಡದಲ್ಲಿ ಪ್ರಸಿದ್ಧವಾಗಿರುವ ಸರ್ವಜ್ಞನ ವಚನಗಳೂ ಈ ಜಾತಿಗೇ ಸೇರಿದವು. 'ಮಂಡೆ ಬೋಳಿಸಿಕೊಂಡು ತುಂಡುಗಂಬಳಿ ಹೊದೆದು, ಹಿಂಡನಗಲಿದ ಗಜದಂತೆ' ಇದ್ದ

ಇವನು 'ನಿಂತಲ್ಲಿ ಕುಂತಲ್ಲಿ' ಪದಗಳನ್ನು ಹಾಡಿ ಜನರ ಹುಳುಕುಗಳನ್ನು ಬಯಲಿಗೆಳೆಯುತ್ತಿದ್ದನು. ಅವನು ತನ್ನ ಪದಗಳನ್ನು ಯಾವ ಸಂದರ್ಭದಲ್ಲಿ ಹೇಳಿದನೆಂದು ಈಗ ಖಂಡಿತವಾಗಿ ಅರಿಯಲಾಗದಿದ್ದರೂ, ಸನ್ನಿವೇಶವೇನೆಂಬು ದನ್ನು ಊಹಿಸಿಕೊಳ್ಳಬಹುದು. ವ್ಯವಹಾರದಲ್ಲಿ ಮಗ್ನನಾಗಿ ದೇವಾಲಯವನ್ನು ಸುತ್ತುತ್ತಿದ್ದ ಸಿರಿವಂತನನ್ನು ನೋಡಿ 'ಚಿತ್ತವಿಲ್ಲದೆ ಗುಡಿಯ ಸುತ್ತಿದಡೆ ಫಲವೇನು? ಎತ್ತು ತಾ ಗಾಣವನು ನಿತ್ಯದಿ ಸುತ್ತಿಬಂದಂತೆ ಸರ್ವಜ್ಞ' ಎಂದು ಆಡಿದ ಮಾತು ನಮ್ಮ ಮೇಲೆ ಬಾಣದಂತೆ ಬಂದೆರಗುತ್ತದೆ. ಈ ಮುಕ್ತಕಗಳನ್ನು ರಚಿಸಿ ನೂರಾರು ವರ್ಷಗಳಾಗಿದ್ದರೂ ಅವುಗಳ ಸ್ವಾರಸ್ಯ ಹೇಗೆ ತಾನೆ ಮಂಕಾದೀತು?

## ಜನಪದ ಮುಕ್ತಕಗಳು

ವಿದ್ಯೆಯನ್ನು ಪಡೆದು, ಸಂಸ್ಕಾರವನ್ನು ಹೊಂದಿ ತನ್ಮೂಲಕ ತಮ್ಮ ಪ್ರತಿಭೆಯನ್ನು ಬೆಳಗಿಸಿಕೊಂಡ ಕವಿಗಳು ರಚಿಸಿದ ಮುಕ್ತಕಗಳನ್ನು ಕುರಿತು ಈವರೆಗೆ ಪ್ರಸ್ತಾಪಮಾಡಲಾಯಿತು. ಈಗ ಜನಸಾಮಾನ್ಯರು ರಚಿಸಿದ ಹಾಡುಗಳನ್ನು ಕುರಿತು ಕೆಲವು ಮಾತುಗಳನ್ನು ಇಲ್ಲಿ ಹೇಳಬಹುದು. ಜನಸಾಮಾ ನ್ಯರು ಅದರಲ್ಲೂ ವಿಶೇಷವಾಗಿ ಹೆಣ್ಣುಮಕ್ಕಳು ಕಟ್ಟಿರುವ ಈ ಹಾಡುಗಳು ಪಾಂಡಿತ್ಯದ ಭಾರದಿಂದ ಜಗ್ಗುತ್ತಿಲ್ಲ. ಈ ನಾಡಕವಿಗಳಿಗೆ ವಿದ್ಯೆಯ ಅರಿವಿಲ್ಲದಿದ್ದರೂ ಪುರಾಣ ಶ್ರವಣ ದಿಂದ, ದೊಡ್ಡವರ ಸಹವಾಸದಿಂದ ತಾವು ಪಡೆದಿರುವ

ಸಂಸ್ಕಾರದಿಂದ ಕವಿತ್ವ ಕಟ್ಟುವ ಶಕ್ತಿಯುಂಟು. ಒಂಬತ್ತನೆಯ ಶತಮಾನದಲ್ಲಿ 'ಕವಿರಾಜಮಾರ್ಗ'ವೆಂಬ ಅಲಂಕಾರ ಗ್ರಂಥವನ್ನು ರಚಿಸಿದ ನೃಪತುಂಗನೆಂಬ ರಾಷ್ಟ್ರಕೂಟ ಚಕ್ರವರ್ತಿ ಕನ್ನಡಿಗರನ್ನು ಕುರಿತು ತನ್ನ ಗ್ರಂಥದಲ್ಲಿ 'ಪದನರಿದು ನುಡಿಯಲುಂ ನುಡಿದುದನಾರಯಲುಂ ಆರ್ಪರಾ ನಾಡವರ್ಗಳ್ ಚದುರರ್ ನಿಜದಿಂ ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತಮತಿಗಳ್' ಎಂದ ಹೊಗಳಿಕೆ ಈ ಕವಿಗಳಿಗೆ ಚೆನ್ನಾಗಿ ಒಪ್ಪುತ್ತದೆ. ಕೃತಕತೆಗೆ ಎಡೆಗುಡದ ಕವಿತೆ ನೇರವಾಗಿ ಕವಿಹೃದಯದಲ್ಲಿ ಹೊರಹೊಮ್ಮಿ ನೇರವಾಗಿ ಸಹೃದಯನನ್ನು ಮುಟ್ಟುತ್ತದೆ. ಸಂಸಾರದ ಸುಖದುಃಖಗಳನ್ನೂ ಪ್ರಣಯ ಪ್ರಸಂಗ ಮಾನವನ ಆಸೆ ನಿರಾಶೆಗಳನ್ನೂ ಈ ಕವಿತೆಗಳು ತಮ್ಮ ವಸ್ತುವನ್ನಾಗಿ ಒಳಗೊಂಡು, ತುಂಬ ಮೋಹಕವಾದ ರೀತಿಯಲ್ಲಿ ಚಿತ್ರಿಸುತ್ತವೆ.

## ಬೀಳ್ಕೊಡಿಗೆ

ಹೆಣ್ಣುಮಕ್ಕಳನ್ನು ಗಂಡನ ಮನೆಗೆ ಕಳುಹಿಸಿಕೊಡುವ ದೃಶ್ಯ ಪ್ರತಿಯೊಂದು ಹಿಂದೂ ಕುಟುಂಬದಲ್ಲಿಯೂ ಅತ್ಯಂತ ಸಂಭ್ರಮಪೂರ್ಣವಾದುದು. ಒಳ್ಳೆಯ ಗಂಡನನ್ನು ಪಡೆದು ತಮ್ಮನ್ನು ನೆನೆಯದೆ ಸುಖವಾಗಿ ಬಾಳುಮಾಡಲು ಹೋಗುವಳೆಂಬ ಸಂತೋಷ ಒಂದು ಕಡೆ ತಂದೆತಾಯಿಗಳಿಗಿದ್ದರೆ, ಹತ್ತಾರು ವರ್ಷಗಳ ಕಾಲ ಅಕ್ಕರೆಯಿಂದ ಬೆಳೆಸಿದ ಮಗಳನ್ನು, ಮನೆಯ ಬೆಳಕನ್ನು ಕಳುಹಿಸಿಕೊಟ್ಟು ಮನೆಯನ್ನು ಬರಿದು

ಮಾಡಿಕೊಳ್ಳಬೇಕೇ ಎಂಬ ಸಂಕಟ ಅವರನ್ನು ಮುಸುಕಿರುತ್ತದೆ. ಚಕ್ರವರ್ತಿನಿಯ ಪದವಿಯನ್ನು ಅಲಂಕರಿಸಲು ಹೊರಟಿದ್ದ ಶಕುಂತಳೆಯನ್ನು ಕಳುಹಿಸಿಕೊಡುವಾಗ ಅವಳ ಸಾಕು ತಂದೆಯೂ ಸಂಯಮಿಯೂ ಆದ ಕಣ್ವರ ಕೊರಳೇ ದುಃಖದಿಂದ ಬಿಗಿದುಬಂತು. ಇನ್ನು ಗೃಹಸ್ಥರ ಮಾತೇನು? ಈ ಮಹಾ ಸಂಭ್ರಮದ ನಡುವೆ ತಾಯಿಯ ದುಃಖ ಅವಳ ಹೃದಯವನ್ನು ಸೀಳಿಕೊಂಡು ಹೊರಹೊಮ್ಮುತ್ತದೆ. ಆ ಕರುಳಿನ ಕೂಗು ಇದು.

ಒಂಬತ್ತು ತಿಂಗಳು ಹೊತ್ತು ಹೆತ್ತ ಮಗಳನ್ನು ಒಮ್ಮೆಲೇ ಅಗಲುವುದೆಂತು?

ಒಂಬತ್ತು ತಿಂಗಳು ನಿನ್ನ ತುಂಬಿಕೊಂಡು ತಿರುಗೇನ
ಹಂಬಲಿಸಿ ನಿನ್ನ ಹಡದೇನ, ಚಿತ್ತಾರದ
ಗೊಂಬಿ ನಿನಗೊಪ್ಪಿಸಿ ಕೊಡಲ್ಹ್ಯಾಂಗ

ಮಗಳನ್ನು ಹೊತ್ತು ಹೆತ್ತದ್ದಾಯಿತು. ಈಕೆಯೋ ರೂಪವತಿ. 'ಚಿತ್ತಾರದ ಗೊಂಬಿ' (ಹಾಗೆಯೇ ಇರಬೇಕಲ್ಲವೇ? ಹೆತ್ತವರಿಗೆ ಹೆಗ್ಗಣ ಮುದ್ದಲ್ಲವೇ?) ಇವಳನ್ನು ಬೆಳಸಿದ ರೀತಿ ಯಾದರೋ ಇದು.

ಹರಿಯಾಗೆದ್ ನನ್ಮಗಳು ಹಾಲು ಬಾನುಣ್ಣವಳು
ತೂಗು ಮಂಚದಾಗ ಮಲಗುವಳು, ನನ ಮಗಳು
ನಗುನಗುತ ಮನೆ ಬೆಳಗುವಳು

ಮೊಸರು ಅನ್ನ ಕಲಿಸಿ ತುಸಪೆ ಉಣ್ಣಂತ್ಹೇಳಿ
ರಾಶೀಯ ಉಣಿಸಿ ಸಲಹೀದೆ, ನನ ಮಗಳೆ
ಕೂಸೆ ನನ ಮನಿಗೆ ಎರವಾದೆ.

ಮುದ್ದಾಗಿ ಬೆಳೆದ ಈ ಮಗು ತುಂಬ ಅಭಿಮಾನಿ!

ತೊಟ್ಟೀಲ ತೂಗ್ರೆಂಪ್ರ ಸಿಟ್ಟೀಲೆ ಕೂಡ್ರುವಳು
ಬಟ್ಟ ಬೆಳಗಾಕ ಅರಿಯ್ಯಳ, ಮಗಳನ್ನ
ಕೊಟ್ಟೇನಿ ಮಾವನ ಕೈಯೊಳಗ.

ಹೆತ್ತ ಹೊಟ್ಟೆಗೆ ಹಿಡಿಸಲಾರದಷ್ಟು ಸಂಕಟವುಂಟಾದರೂ ತಾಯಿ ಮಗಳನ್ನು ಅತ್ತೆಗೆ ಒಪ್ಪಿಸಿಕೊಡುತ್ತಾಳೆ. ಆಗ ತಾಯಿ ಆಡುವ ಮಾತು ಯಾರ ಕಣ್ಣಿನಲ್ಲಾದರೂ ನೀರನ್ನು ಉಕ್ಕಿಸುತ್ತದೆ.

ಸುಡುವ ಬೆಂಕಿಗೆ ಎಣ್ಣೆ ಕೊಡವ ಸುರಿದಂತೆ
ಹಡೆದವ್ವ ಹೊಟ್ಟೆ ತಳಮಳಿಸಿ, ಮಗಳೆ ನಿನ್ನ
ಕೊಡ್ತೀವಿ ಒಪ್ಪಿಸಿ ಇವರೀಗೆ

ನನ್ನ ಮಗಳಲ್ಲವ್ವ ನಿಮ್ಮ ಮಗಳೀಕೆಂದು
ಚಂದಾಗಿ ಮಗಳ ಸಲಹವ್ವ, ಎನ್ನೂತ
ಅತ್ತೆವ್ವ ಕೈಯಾಗ ಕೊಟ್ಟಾಳ

ಹೆಣ್ಣನ್ನು ಒಪ್ಪಿಸಿಕೊಟ್ಟ ಮೇಲೆ, ಈ ಅಗಲಿಕೆಯ ದೃಶ್ಯದಿಂದ ಕುದಿಗೊಂಡ ತಾಯಿಗೆ ಬಾಳಿನಲ್ಲಿ ಈ ಸನ್ನಿವೇಶವೇ ಒದಗಬೇಡವೆನಿಸುತ್ತದೆ.

ಹೆಣ್ಣು ಹಡೆಯಲಿ ಬ್ಯಾಡ ಹೆರವರಿಗಿ ಕೊಡಬೇಡ
ಹೆಣ್ಣು ಹೋಗಾಗ ಅಳಬ್ಯಾಡ ಹಡೆದವ್ವ
ಸಿಟ್ಟಾಗಿ ಶಿವಗ ಬೈಬ್ಯಾಡ

ತಾಯಿಯ ಹೃದಯ ದುಃಖದಿಂದ ಕರಗಿ ನೀರಾಗಿ ತನ್ನ ವೇದನೆಯನ್ನು ಮಾತಿನ ಮೂಲಕ ತೋಡಿಕೊಂಡರೆ, ತಂದೆ ನೆರೆದ ಜನರೆದುರಿಗೆ ತನ್ನ ದುಃಖವನ್ನು ವ್ಯಕ್ತಪಡಿಸುವಹಾಗಿಲ್ಲ.

ಆತನು ಅನುಭವಿಸುವುದು ಮೂಕನೋವು ; ಮೂಕ ಯಾತನೆ. ಅವನ ದುಃಖ ತಾಯಿಯಾದವಳ ದುಃಖಕ್ಕಿಂತ ಕಡಮೆಯಾದು ದಲ್ಲ. ಹೃದಯವನ್ನು ಗಟ್ಟಿಮಾಡಿಕೊಂಡು ತಂದೆ ಮೌನವಾಗಿ ತನ್ನ ದುಃಖದ ಆಳವನ್ನು ಸೂಚಿಸುತ್ತಾನೆ. ಆ ಚಿತ್ರ ಸುಂದರ ವಾಗಿದೆ.

ಹೆಣ್ಣು ಮಕ್ಕಳ ಕಳುಹಿ ಕಣ್ಣೀಗಿ ನೀರತಂದು
ಸಣ್ಣ ಸೆಲ್ಲೆದಲೆ ಮುಸುಗ್ಹಾಕಿ ಹಡೆದಪ್ಪ
ಹೆಣ್ಣು ಸಾಕೆಂದ ಜನುಮಾಕ

ಹೆಣ್ಣುಮಕ್ಕಳಿಗೆ ಅತ್ತೆಯ ಮನೆ ಹೂವಿನ ಹಾಸಿಗೆಯೇನಲ್ಲ. ಗಂಡನ ಮನೆಯನ್ನು ಸೇರಿದ ಹೆಣ್ಣು ಹೊರಬೇಕಾದ ಹೊಣೆ ಅನೇಕವುಂಟು. ಆಕೆ ಅತ್ತೆಮಾವಂದಿರಿಗೆ ಮೆಚ್ಚಾಗಿ ನಡೆಯಬೇಕು. ಗಂಡನ ಮನಸ್ಸನ್ನು ಅನುಸರಿಸಿ ನಡೆಯ ಬೇಕು. ತನ್ನ ಸುತ್ತಲೂ ಇರುವ ಪ್ರಪಂಚಕ್ಕೆ ಆಕೆ ಹೆದರಿ ಬಾಳಬೇಕು. ಏಕೆಂದರೆ ಯಾವ ನಿಮಿಷದಲ್ಲಿ ಅವಳ ವಿಷಯ ದಲ್ಲಿ ಯಾರು ಅತ್ತೆಯ ಮನೆಯವರಿಗೆ ಚಾಡಿ ಹೇಳುವರೋ ? ಹೆಚ್ಚೇನು ? ಹೆಣ್ಣು ತನ್ನ ಉತ್ತಮವಾದ ಶೀಲದಿಂದ ಹುಟ್ಟಿದ ಮನೆಗೂ ಸೇರಿದ ಮನೆಗೂ ಕೀರ್ತಿ ತರಬೇಕೆಂಬುದು ತಾಯಿ ತಂದೆಗಳ ಹಂಬಲ. ಅತ್ತೆಮಾವಂದಿರನ್ನು ಹೊರಗೆ ಹಾಕಿ, ಅಣ್ಣತಮ್ಮಂದಿರಲ್ಲಿ ಭೇದ ಹುಟ್ಟಿಸಿ ಹೆಣ್ಣು ಬಾಳಿದರೆ ಬಂತೇ ಭಾಗ್ಯ ? ಹಾಗಾಗಬಾರದೆಂದು ತಂದೆತಾಯಿಗಳು ಮಗಳಿಗೆ ಹೇಳಿಕಳುಹಿಸುವ ಬುದ್ಧಿವಾದ ಇದು.

ಅತ್ತಿ ಮಾವಾಗಂಜಿ ಸುತ್ತೇಳು ನೆರೆಗಂಜಿ
ಮತ್ತೆ ನಲ್ಲನ ದನಿಗಂಜಿ ನಡೆದರೆ
ಎಂಥ ಉತ್ತಮರ ಮಗಳೆಂದ

ಅತ್ತೀಯು ಮನಿಯಾಗ ಹತ್ತೆಂಟು ಬೈದರೆ
ಉತ್ತರ ಬ್ಯಾಡ ವನ ಮಗಳೆ ನಿಮ್ಮತ್ತಿ
ಎಂಥ ಉತ್ತಮರ ಮಗಳಲ್ಲೆ
ಅತ್ತೀಯ ಮನಿಯಾಗ ಮುತ್ತಾಗಿ ಇರಬೇಕ
ಹೊತ್ತು ನೀಡಿದರೆ ಉಣಬೇಕ ತವರವರ
ಉತ್ತಮರ ಹೆಸರು ತರಬೇಕು.

ಗಂಡನ ಮನೆಗೆ ಹೊರಟು ನಿಂತ ಶಕುಂತಳೆಗೆ ಇದಕ್ಕಿಂತಲೂ ಮಿಗಿಲಾಗಿ ಕಣ್ವರು ಹೇಳಿದ ಮಾತಾದರೂ ಏನು?

## ಗಂಡನ ಮನೆಯ ವಾಸ

ಮೊದಲಬಾರಿ ಗಂಡನ ಮನೆಗೆ ಹೋದ ಹೆಣ್ಣಿಗೆ ಹೊಸ ಆವರಣ ಚೆನ್ನಾಗಿ ಒಗ್ಗಿಕೊಳ್ಳುತ್ತದೆ. ಇದಕ್ಕೆ ಮುಖ್ಯವಾದ ಕಾರಣ ಗಂಡನು ತನ್ನ ಪ್ರಿಯಳ ವಿಷಯದಲ್ಲಿ ತುಂಬ ಹೆಚ್ಚಿನ ಅನುರಾಗವನ್ನು ತೋರುವುದು. ಸಾಮಾನ್ಯವಾಗಿ ಹೆಣ್ಣುಮಕ್ಕಳಿಗೆ ತೌರೂರೆಂದರೆ ವಿಶೇಷ ಮಮತೆ. ಅವರಿಗೆ ತಾಯಿಯ ಮನೆಗೆ ಹೋಗಿಬರಲು 'ತೌರೂರ ದಾರಿಯಲಿ ಕಲ್ಲಿಲ್ಲ ಮುಳ್ಳಿಲ್ಲ.' ಆದರೆ ತೌರೂರಿನ ಹಂಬಲನ್ನು ಕೂಡ ಮರೆಸಿದೆ ಈ ಗಂಡನ ಪ್ರೀತಿ. ಸಂಜೆ ಮನೆಗೆ ಬರುವಾಗ ಬಟ್ಟೆಯ ಪದರದಲ್ಲಿ ಅಚ್ಚಮಲ್ಲಿಗೆಯ ಹೂವನ್ನು ತಂದು ಹೆಂಡತಿಗೆ ಮುಡಿಯಲು ಕೊಟ್ಟು ಈ ತರುಣನು ತನ್ನ ಪ್ರೇಮವನ್ನು ವ್ಯಕ್ತಪಡಿಸುತ್ತಾನೆ. ಇವನನ್ನು ಬಿಟ್ಟಿರಲು ಈ ತರುಣಿಗೆ ಮನಸ್ಸು ಒಪ್ಪದು. ಒಮ್ಮೆ ತೌರಿಗೆ ಬಾರೆಂದು ಕರೆಯಲು ಹೋದ ತಾಯಿಗೆ ಮಗಳು ಈ ರೀತಿ ಉತ್ತರ ಹೇಳುತ್ತಾಳೆ.

ಹಚ್ಚಡದ ಪದರಾಗ ಅಚ್ಚಮಲ್ಲಿಗೆ ಹೂವ
ಬಿಚ್ಚಿ ನನ ವ್ಯಾಲ ಒಗೆವಂಥ ರಾಯರನ
ಬಿಟ್ಟ್ಹ್ಯಂಗ ಬರಲೆ ಹಡೆದವ್ವ

ಆದರೆ ಇದರಿಂದ ಹೆಣ್ಣುಮಕ್ಕಳಿಗೆ ತೌರಿನ ಹಂಬಲವೇ ಪೂರ್ತಿಯಾಗಿ ಮರೆತುಹೋಯಿತೆಂದು ತಿಳಿಯಬಾರದು. ಒಮ್ಮೆ ಹೆಂಡತಿ ತೌರಿಗೆ ಹೋಗಬೇಕೆಂದು ಹಟ ಹಿಡಿದಳು. ಹೆಂಡತಿಯನ್ನು ಕರೆದುಕೊಂಡು ಹೋಗಲು ಆಗ ಗಂಡನು ಸಿದ್ಧನಿರಲಿಲ್ಲ. ತನ್ನ ಕಷ್ಟವನ್ನು ಹೇಳಿಕೊಂಡರೂ ಹೆಂಡತಿ ಅವನ ಮಾತನ್ನು ಕೇಳದಿರಲು, ಗಂಡನು ಕೋಪದ ಮಾರ್ಗವನ್ನು ಹಿಡಿದನು.

ಮುಡದೀನ ಬಡದಾನ ಮನದಾಗ ಮರುಗ್ಯಾನ
ಒಳಗ್ಹೋಗಿ ಸೆರಗ ಹಿಡಿಯೂಳ ಕೇಳ್ಯಾನ
ನಾ ಹೆಚ್ಚೋ ನಿನ್ನ ತವರ್ಹೆಚ್ಚೊ

ಕೋಪದಲ್ಲಿ ಈ ತರುಣನು ಹೆಂಡತಿಯನ್ನು ಹೊಡೆಯಲಿಲ್ಲ; **ಬಡಿದ.** ಆ ಮೇಲೆ ಕೋಪದ ಆವೇಗ ಇಳಿದಾಗ ತಾನು ಮಾಡಿದ ಕೆಲಸಕ್ಕಾಗಿಯೂ ತನ್ನ ಪ್ರಿಯೆಗಾಗಿಯೂ ಇವನಿಗೆ ಪಶ್ಚಾತ್ತಾಪವುಂಟಾಯಿತು. (ಪದ್ಯದ ಮೊದಲ ಸಾಲಿನಲ್ಲಿ ಭಾವಕ್ಕೆ ತಕ್ಕಂತೆ ಬರುವ ಪದಗಳ ಜೋಡಣೆಯನ್ನು ಗಮನಿಸಿ) ಹೆಂಡತಿಯ ವಿಷಯದಲ್ಲಿ ಮರುಕವುಂಟಾಗುತ್ತಲೇ ಅವಳನ್ನು ತನ್ನ ವಿಷಯದಲ್ಲಿ ಪ್ರಸನ್ನಳಾಗುವಂತೆ ಮಾಡಿಕೊಳ್ಳಲು ಯತ್ನಿಸಿದನು. ತನ್ನ ಪ್ರಿಯೆ ತೌರಿಗೆ ಏಕೆ ಹೋಗಬೇಕು? ಇಲ್ಲಿ ಇಲ್ಲದ ಸೌಖ್ಯ ಅಲ್ಲೇನಿದೆ? ಅವನು ಮುನಿಸಿಕೊಂಡ ಹೆಂಡತಿಯನ್ನು ಸಮಾಧಾನ ಮಾಡಿದ ರೀತಿ ಇದು.

ಹಾಸೀಗಿ ಹಾಸೆಂದ ಮಲ್ಲೀಗಿ ಮುಡಿಯೆಂದ
ಜ್ಯಾಸತ್ತರೆ ಮುಡದಿ ಮಲಗೆಂದ ನನ ರಾಯ
ತನ ಸೋದಿ ತೌರ ಮರಿಯೆಂದ

ಬಡತನವಿರಲಿ, ಸಿರಿತನವಿರಲಿ ದಾಂಪತ್ಯಜೀವನದಲ್ಲಿ ಯಾವಾಗಲೂ ಸಾಮರಸ್ಯವಿರುವುದೆಂದೂ, ವಿರಸ ಉಂಟಾಗದೆಂದೂ ಯಾರೂ ಭಾವಿಸಕೂಡದು. ಮೇಲೆ ನಿರೂಪಿಸಿದಂತೆ ಈ ವಿರಸ ಹೆಣ್ಣಿನ ಹಟಮಾರಿತನದಿಂದ ಉಂಟಾಗಬಹುದು. ಇಲ್ಲವಾದರೆ ಕ್ಷಣಿಕವಾಗಿಯಾದರೂ ಗಂಡು ತನ್ನ ಕಣ್ಣಿನ ಕುಡಿನೋಟವನ್ನು ಬೇರೊಂದು ಹೆಣ್ಣಿನ ಕಡೆ ತಿರುಗಿಸುವುದರಿಂದ ಈ ವಿರಸ ಉಂಟಾಗಬಹುದು.

'ನನ್ನಲ್ಲಿ ಕಾಣದ ಯಾವ ಸೌಂದರ್ಯವನ್ನು ನೀನು ಬೇರೆ ಹೆಣ್ಣಿನಲ್ಲಿ ಕಂಡೆ, ನಿನ್ನ ಮರ್ಯಾದೆಗೆ ಇದು ತರವಲ್ಲ' ಎಂದು ಹೆಂಡತಿ ಗಂಡನಿಗೆ ಬುದ್ಧಿ ಹೇಳುತ್ತಾಳೆ.

ಅಂಗೀಯ ಮ್ಯಾಲಂಗಿ ಛಂದೇನೊ ನನರಾಯ
ರಂಬಿ ಮ್ಯಾಲ ರಂಬಿ ಪ್ರತಿರಂಬಿ, ಬಂದರೆ
ಛಂದೇನೊ ರಾಯ ಮನಿಯಾಗ

ತನ್ನ ವರ್ತನೆಯನ್ನು ಪ್ರಶ್ನಿಸಿದ ಹೆಂಡತಿಯ ವಿಷಯದಲ್ಲಿ ಗಂಡನ ಕೋಪ ಮುಗಿಲು ಮುಟ್ಟಿತು. ಕಾಲು ಹಿಡಿದರೂ ಇಳಿಯದಂತಹುದಾಯಿತು. ಅದರ ವರ್ಣನೆ ಇಲ್ಲಿವೆ.

ಬಟ್ಟಲಗಣ್ಣೀಲಿ ದಿಟ್ಟೀಸಿ ನೋಡ್ಯಾರ
ಸಿಟ್ಟ್ಯಾಕೊ ರಾಯ ನನ ಮ್ಯಾಲ, ನಾ ಅಂಥ
ಹುಟ್ಟಿಸ್ಯಾಡವರ ಮಗಳಲ್ಲ

ಹಾಸಿದ್ಹಾಸಿಗಿ ಬಿಟ್ಟು ಹಾದೀಗಿ ಮಲಗ್ಯಾರ
ಸೂಸಗಾಳೀಗಿ ಬಳಕೂವ, ರಾಯರಿಗೆ
ಏಸು ಬಾರಿ ಕಾಲ ಹಿಡ್ಡಿಯಾಲೆ

ಮೇಲಿನ ಎರಡು ಪದ್ಯಗಳಲ್ಲಿ ' ಬಟ್ಟಲು ಗಣ್ಣು' ಎಂಬುದು ಪುರುಷನ ಸೌಂದರ್ಯಕ್ಕೂ, ' ಸೂಸಗಾಳೀಗಿ ಬಳಕೂವ' ರಾಯರು ಎನ್ನುವುದು ಸೌಕುಮಾರ್ಯಕ್ಕೂ ಪ್ರತೀಕವಾಗಿದ್ದು ಒಲಿದವರ ಪ್ರೀತಿಯ ಆಳವನ್ನು ತೋರಿಸುತ್ತದೆ.

ಗಂಡಹೆಂಡಿರ ನಡುವೆ ಎಂಥ ವಿರಸವೇ ಇರಲಿ, ತನ್ನ ಬದುಕಿಗೆಲ್ಲ ಅವನೇ ಬೆಳಕು, ಅವನಿಲ್ಲದೆ ತನ್ನ ಬಾಳಿಗೆ ಗತಿಯಿಲ್ಲ ಎಂಬ ಭಾವನೆ ಹೆಂಡತಿಯಲ್ಲಿ ಗಾಢವಾಗಿ ಮೂಡಿರುತ್ತದೆ. ಆ ಭಾವವನ್ನು ವ್ಯಕ್ತಪಡಿಸುವ ಪದ್ಯಗಳಿಂದ ಈ ಭಾಗವನ್ನು ಮುಗಿಸಬಹುದು.

ಅರಸರ ದಯದಿಂದ ಅರಶೀಣ ಕುಂಕೂಮ
ಗೋದ ಮಲ್ಲೀಗಿ ನನೆದಂಡಿ, ಕಟ್ಟೋದು
ಅರಸ ಮಾರಾಯ್ರ ದಯದಿಂದ

ಕಾಜಿನ ಕಂಬಕ ಮೋಜೀಲೆ ನಿಂತಾರ
ಊದಿನ ಕಡ್ಡಿಂಗ ಬಳಕೂವ, ದೊರಿಗೂಡಿ
ಬದುಕು ಮಾಡೂದ ಬಲು ಚಂದ

## ವಿರಹ

ಗಂಡನ ಒಪ್ಪಿಗೆಯನ್ನು ಪಡೆದು ಹೆಂಡತಿ ತೌರಿಗೆ ಹೋದೊಡನೆಯೇ ತರುಣನಿಗೆ ಮನೆಯಲ್ಲಿ ಮಂಕುಬಡಿದಂತಾಯಿತು. ಮೊದಲು ಬಾರಿ ಮನೆಗೆ ಬಂದ ಹೆಣ್ಣು ತರುಣನ ಬಾಳಿಗೆ

ಬೆಳಕನ್ನು ತಂದಿದ್ದಳು. ಈಗ ಅವಳು ಊರಿಗೆ ಹೊರಟು ಹೋಗಲು ಈ ಯುವಕನಿಗೆ ಅಡಿಗೆ ಬಾಯಿಗೆ ರುಚಿಸದಾಯಿತು. ಅಡಿಗೆಯ ಮನೆಯಲ್ಲಿ ಬಳೆಗಳ ಸದ್ದು ಕೇಳಿ ಬರಲಿಲ್ಲ. ತಾಯಿಯನ್ನು ನೋಡಿ ಆ ತರುಣನು ಈ ರೀತಿ ಹೇಳಿದನು—

ಅಡಗೀಯ ಮನಿಯಾಗ ಮಡದೀಯ ಸುಳಿವಿಲ್ಲ
ಅಡಗಿ ಬಾಯೀಗಿ ರುಚಿಯಿಲ್ಲ ಹಡೆದವ್ವ
ಮಡದಿ ತವರೀಗಿ ಹೋಗ್ಯಾಳ

ಹತ್ತಾರು ವರ್ಷಗಳು ಅಕ್ಕರೆಯಿಂದ ಅನ್ನವಿಟ್ಟ ತಾಯಿಯ ಅಡಿಗೆಗಿಂತ ಮೊನ್ನೆ ಮೊನ್ನೆ ಬಂದ ಹೆಂಡತಿಯು ಮಾಡಿದ ಅಡಿಗೆ ರುಚಿಯಾಯಿತು ಈ ತರುಣನಿಗೆ. ಮಗನ ಮಾತು ತಾಯಿಗೆ ಶೂಲದಂತೆ ಇರಿದಿರಬೇಕಲ್ಲವೆ? ಅಷ್ಟಲ್ಲದೆ ಹಿರಿಯರು ಹೇಳಿದರೇ ಈ ಅನುಭವದ ನುಡಿಯನ್ನು ?

ಸೊಸಿಯು ಬರುತಾಳೆಂತ ಖುಸಿ ಭಾಳ ಮನದಾಗ
ಸೊಸಿ ಬಂದು ಮಗನ ಕಸಗೊಂಡು ಬಾಳ್ವಾಗ
ಮುಗಿಲೀಗ ಬಾಯಿ ತಗದಾಳ

ಈ ವಿರಹವೇದನೆ ಗಂಡಿಗೆ ಮಾತ್ರ ಮೀಸಲಾಗಿರಲಿಲ್ಲ. ಹೆಣ್ಣಿಗೂ ಗಂಡಿಗಿಂತ ಒಂದು ಕೈ ಮಿಗಿಲಾಗಿತ್ತು. ಇದಕ್ಕೆ ಕಾರಣ ಇಷ್ಟೇ. ಹಿಂದಿನ ಕಾಲದಲ್ಲಿ ಈಗಿರುವಂತೆ ವಿಶೇಷವಾಗಿ ಪ್ರಯಾಣ ಸೌಕರ್ಯಗಳಿರಲಿಲ್ಲ. ಪರದೇಶಗಳಿಗೆ ಹೋದವರು ಹಿಂದಿರುಗಿ ಬರಬೇಕಾದರೆ ಬಹಳಕಾಲ ಹಿಡಿಯುತ್ತಿತ್ತು. ಮಳೆಗಾಲವಾದರಂತೂ ಪ್ರಯಾಣಿಕರ ಪಾಡು ಬೇಡ. ದೊಡ್ಡ ನದಿಗಳು ತುಂಬಿ ಹರಿದು ಅವರ ಪ್ರಯಾಣಕ್ಕೆ ಅಡ್ಡಿ ತರು

ತ್ತಿದ್ದವು. ಕಳ್ಳಕಾಕರ ಭೀತಿ ಬೇರೆ. ಹೀಗಾಗಿ ಅವರ ಪ್ರಯಾಣ ತಡವಾದರೆ ಮನೆಯಲ್ಲಿದ್ದವರ ಗತಿ? ಅದನ್ನು ಊಹಿಸಿಯೇ ಅರಿಯಬೇಕು! ಹೊಸದಾಗಿ ಮನೆಗೆ ಬಂದ ಹೆಣ್ಣು ಅತ್ತೆಯ ದರ್ಪದ ಆಳ್ವಿಕೆಯಲ್ಲಿ ಅತ್ತಿಗೆ ನಾದಿನಿಯರ ನಡುವೆ 'ಹೊಟ್ಟೆಯ ಮಾಣಿಕ್ಯ' ಇನ್ನೂ ಆಗಿಲ್ಲದಿರುವಾಗ ವಿರಹದಿಂದ ಕಾಲ ನೂಕುವುದು ಎಷ್ಟು ಕಷ್ಟ! ಇಂಥ ಹೆಂಡತಿಯನ್ನು ಅಗಲುವಾಗ ಗಂಡನ ಮುಖ ಬಾಡುತ್ತದೆ.

ಊರೀಗೆ ಹೋಗವರ ಮಾರ್‍ಯಾಕ ಬಾಡ್ಯಾವ
ಗೀರ ಗಂಧ್ಯಾಕ ಬೆವತಾವ, ಮಡದೀನ
ಬಿಟ್ಟು ಹೊಂಟಾರ ಪರನಾಡ

ಹನಿಗಣ್ಣಾಗಿ ಮುಖ ಸಣ್ಣದು ಮಾಡಿಕೊಂಡು ನಲ್ಲೆ, ಪ್ರಯಾಣ ಹೊರಟ ನಲ್ಲನನ್ನು ಈ ರೀತಿ ಕೇಳುತ್ತಾಳೆ.

ಎಂದ ಬರತೀರಿ ನನ್ನ ಗಂಧದ ರತಿಗಾರ
ರುಮ್ಮಾಲ ಎಲ್ಲ ಪರಿಮಾಳ, ನನ ನಲ್ಲ
ಎಂದ ಬರತೀರಿ ನನಗ್ಹೇಳ

ನಲ್ಲನ ರುಮಾಲಿನ ಪರಿಮಳವನ್ನು ಕಂಡು ಈ ಹೆಣ್ಣಿಗೆ ಏನು ಶಂಕೆಯುಂಟಾಯಿತೋ! ಆಗ ಆ ಪ್ರಿಯನು ಪ್ರಿಯೆಯನ್ನು ಸಮಾಧಾನಪಡಿಸಿದ ರೀತಿ ಇದು.

ಕಮಳದ ಹೂ ನಿನ್ನ ಕಾಣದೆ ಇರಲಾರೆ
ಮಲ್ಲಿಗೆ ಮಾಯೆ ಬಿಡಲಾರೆ, ಕೇದಿಗೆ
ಗರಿ ನಿನ್ನಗಲಿ ಇರಲಾರೆ

ಗಂಡ ಹೊರಟುಹೋದ ಮೇಲೆ 'ಇಂದೀನ ರಾತ್ರಿ ಹ್ಯಾಂಗಾರೆ ಕಳೆಯಾಲಿ' ಎಂಬ ಸಮಸ್ಯೆ ಆಕೆಗುಂಟಾಯಿತು.

ಗಂಡನಿಲ್ಲದ ಮನೆ ಆಕೆಗೆ ಬೆಕೋ ಎನಿಸಿತು. ಮನೆಯಲ್ಲಿ ಯಾಲಕ್ಕಿಕಾಯಿ ಸುಲಿದು ಅಡಿಗೆ ಮಾಡುವ ಭಾಗ್ಯವಿದ್ದರೇನು, ಗಂಡನಿಲ್ಲದಾಗ. ಆಕೆ ತನ್ನ ಸಖಿಯನ್ನು ಕುರಿತು ಈ ರೀತಿ ಹೇಳುತ್ತಾಳೆ—

ಯಾಲಕ್ಕಿಕಾಯ್ ಸುಲಿದು ಯಾವಡಗಿ ಮಾಡಲಿ
ಊರಿಗ್ಹೋಗ್ಯಾರ ರಾಯರು ಬಾರದೆ
ಯಾವಡಗಿ ಮಾಡಿ ಫಲವೇನು ?

ಗಂಡ ಜೊತೆಯಲ್ಲಿದ್ದರೇ ಎಲ್ಲ ಸೌಖ್ಯಗಳಿಗೂ ಸಾರ್ಥಕ; ಇಲ್ಲವಾದರೆ ಎಲ್ಲವೂ ವ್ಯರ್ಥ—

ವಾರೀಗಿ ರಾಯರು ಊರೀಗಿ ಹೋದರ
ಸೇರ ಭಂಗಾರ ತಗೆದಂಗ, ಮಲ್ಲೀಗಿ
ಮುಡಿದು ಅಂಗಳಕ ಒಗೆದಂಗ

## ತೌರುಮನೆ

ಗಂಜಿಯನ್ನು ಕುಡಿದರೂ ಹೆಣ್ಣುಮಕ್ಕಳಿಗೆ ಗಂಡನ ಮನೆಯೇ ಲೇಸೆಂದು ಬಲ್ಲವರು ನುಡಿದರೂ, ಹೆಂಗಸರಿಗೆ ತೌರೂರೆಂದರೆ ಬಲು ಅಕ್ಕರೆ. ತಂದೆತಾಯಿಗಳ ಅಕ್ಕರೆಯ ಮಡಿಲಿನಲ್ಲಿ ಬೆಳೆದು, ಅಣ್ಣತಮ್ಮಂದಿರು ಅಕ್ಕತಂಗಿಯರೊಡನೆ ದಿನಗಳನ್ನು ಕಳೆದು, ಗೆಳತಿಯರೊಡನೆ ಆಟವಾಡಿದ ತೌರೂರು ಹೆಣ್ಣುಮಕ್ಕಳಿಗೆ ನೆನಪಿನ ಭಂಡಾರ. ಗಂಡನ ಮನೆಯಲ್ಲಿ ಸುಖವಾಗಿದ್ದರೂ ಅವರ ಮನಸ್ಸು ಮೊದಲು ತಾಯಿಯನ್ನು ನೆನೆಯುತ್ತದೆ. ಹಾಗೆ ನೆನೆದಾಗ ಹೆಣ್ಣುಮಕ್ಕಳ ಮನಸ್ಸು ಸಮಾಧಾನಗೊಳ್ಳುತ್ತದೆ.

ಬ್ಯಾಸಗಿ ದಿವಸಕ ಬೇವಿನ ಮರ ತಂಪ
ಭೀಮರತಿಯೆಂಬ ಹೊಳಿ ತಂಪ ಹಡದವ್ವ
ನೀ ತಂಪ ನನ್ನ ತವರೀಗಿ

ತಾಯಿಮಕ್ಕಳ ನಡೆನುಡಿ ಎಲ್ಲವೂ ಒಂದೇ; ಒಬ್ಬರ ಪಡಿಯಚ್ಚು ಮತ್ತೊಬ್ಬರು!

ತಾಯಿಮಕ್ಕಳ ಧನಿಯು ತಾಳ ಬಾರಿಸಿದಂಗ
ಜೋಡಿ ಕಿನ್ನೂರಿ ನುಡಿದಾಂಗ ಹಲಸಂಗಿ
ಹೊತ್ತೇರಿ ತಾಸೆ ಬಡಿದಾಂಗ

ತಾಯಿಯನ್ನು ನೆನೆದು ಮಗಳ ಮನಸ್ಸು ತೌರಿನ ಕಡೆಗೆ ಓಡುತ್ತದೆ. ಗಂಡನ ಮನೆಯಲ್ಲಿ ಬೆಳೆದ ಮಲ್ಲಿಗೆಯನ್ನು ಒಬ್ಬಳೇ ಮುಡಿಯಲಾರಳು. ತೌರನ್ನು ಕುರಿತ ಹೆಣ್ಣಿನ ಹಂಬಲಿಕೆ ಇದು.

ತೌರೂರ ದಾರಿಯಲಿ ಕಲ್ಲಿಲ್ಲ ಮುಳ್ಳಿಲ್ಲ
ಸಾಸುವೆಯಷ್ಟು ಮರಳಿಲ್ಲ ಬಾನಲಿ
ಬಿಸಿಲಿನ ಬೇಗೆ ಸುಡಲಿಲ್ಲ

ಒಬ್ಬಳಿರುವ ಮನೆಗೆ ಹಬ್ಬದಿರು ಮಲ್ಲಿಗೆ
ಒಬ್ಬಳೇ ಕುಯ್ದು ಮುಡಿಲಾರೆ ಮಲ್ಲಿಗೆ
ಹಬ್ಹೋಗು ನನ್ನ ತೌರಿಂಗೆ

ಒಮ್ಮೊಮ್ಮೆ ತಾಯಿಮಕ್ಕಳಲ್ಲಿ ಜಗಳವುಂಟಾದರೂ ಅದು ಬಹು ಬೇಗ ಸಮಾಧಾನಗೊಳ್ಳುತ್ತದೆ.

ತಾಯಿಮಕ್ಕಳ ಜಗಳ ನ್ಯಾಯ ಮಾಡುವರ್ಯಾರ
ವಾಲೀಗಿ ಮುತ್ತ ಪಜನೇನ ಹಡದವ್ವ
ನಾ ಆಡಿದ ಮಾತು ನಿಜವೇನ

ತೌರಿನ ಬಣ್ಣ(ಸೀರೆ)ವುಡಲು ಹೆಣ್ಣುಮಕ್ಕಳಿಗೆ ಬಲು ಹೆಮ್ಮೆ. ತಂದೆತಾಯಿಗಳು ಕೊಟ್ಟ ಪದಾರ್ಥಗಳಲ್ಲಿ ತುಂಬ ಅಭಿಮಾನ.

ತೊಟ್ಟಿಲ ಹೊತ್ಕೊಂಡು ತೌರುಬಣ್ಣ ಉಟ್ಕೊಂಡು
ಅಪ್ಪ ಕೊಟ್ಟೆಮ್ಮೆ ಹೊಡಕೊಂಡು ತಂಗ್ಯವ್ವ
ತಿಟ್ಹತ್ತಿ ತಿರುಗಿ ನೋಡ್ಯಾಳು

ಗಂಡನ ಮನೆಯಲ್ಲಿ ಹೆಣ್ಣಿಗೆ ಯಾವ ಕೊರತೆಯೂ ಇಲ್ಲ. 'ಯಾಲಕ್ಕಿ ಕಾಯ್ಸುಲಿದು ಯಾವಡಿಗೆ ಮಾಡಲಿ' ಎಂದು ದಿಕ್ಕುತೋರದಂತೆ ತನ್ನನ್ನೇ ತಾನು ಪ್ರಶ್ನೆ ಮಾಡಿಕೊಳ್ಳುವ ಸಂಪತ್ತು ಇದೆ. ಆದರೂ ಹೆಣ್ಣುಮಕ್ಕಳ ಮನಸ್ಸು ಒಮ್ಮೊಮ್ಮೆ ಗಂಡನ ಮನೆಯಲ್ಲಿದ್ದಾಗಲೂ ತಾಯಿಯನ್ನು ನೆನೆದು ಮೃದು ಗೊಳ್ಳುತ್ತದೆ.

ಯಾರ ಇದ್ದರ ನನ್ನ ತಾಯವ್ವನ್ಹೋಲರ
ಸಾವಿರ ಕೊಳ್ಳಿ ಒಲಿಯಾಗ ಇದ್ದರ
ಜ್ಯೋತಿ ನಿನ್ನ್ಯಾರು ಹೋಲರ

ತಂದೀಯ ನೆನೆದರ ತಂಗಳು ಬಿಸಿಯಾಯು
ಗಂಗಾದೇವಿ ನನ್ನ ಹಡೆದವ್ನ ನೆನೆದರ
ಮಾಸೀದ ತಲೆಯು ಮಡಿಯಾಯ್ತು

ಆಗ ಅವಳ ಬಾಯಲ್ಲಿ ಮುತ್ತಿನಂಥ ಮಾತೊಂದು ಹೊರ ಬೀಳುತ್ತದೆ.

ಉಂಗೂರ ಉಡದಾರ ಮುರಿದರ ಮಾಡಿಸಬಹುದು
ಮಡದಿ ಸತ್ತರ ತರಬಹುದು ಹಡೆದಂಥ
ತಂದೆ ತಾಯೆಲ್ಲಿ ಸಿಕ್ಕಾರ

ಇಷ್ಟಾದರೂ ತೌರಿನ ಸುಖ ಎಷ್ಟೇ ಇರಲಿ ಗರತಿಗೆ ಗಂಡನ ಮನೆಯೇ ಸ್ವರ್ಗ.

ಗಂಜೀಯು ಕುಡಿದರು ಗಂಡನ ಮನಿ ಲೇಸೆ
ಅಂದಣದ ಮ್ಯಾಲ ಚವುರವ ಸಾರಿದರ
ಹಂಗೀನ ತವರ ಮನಿ ಸಾಕ

## ಅಣ್ಣ ತಮ್ಮ ಅತ್ತಿಗೆ

ತಾಯಿಯ ಮಮತೆಯ ಮಡಲಿನಲ್ಲಿ ಹೆಣ್ಣು ತೌರಿನಲ್ಲಿ ಬೆಳೆಯುತ್ತದೆ. ತಾಯಿಯಾದರೋ ಮಗಳಿಗೆ ಯಾವ ಕೆಲಸ ವನ್ನೂ ಹೇಳುತ್ತಿರಲಿಲ್ಲ. ತೌರಿನಲ್ಲಿ ಹೆಣ್ಣು, ತಾಯಿ 'ತೊಟ್ಟಿಲ ತೂಗೆಂದ್ರೆ ಸಿಟ್ಟಿಲೆ ಕೂಡು'ತ್ತಿದ್ದಳಂತೆ! 'ಬಟ್ಟಲ ಬೆಳಗಾಕೆ ಅರಿಯದ ಮಗಳು' ಈಕೆ. 'ಮೊಸರು ಅನ್ನ ಕಲಿಸಿ ತುಸನ ಉಣ್ಣಂತ ಹೇಳಿ ರಾಸಿಯು ಉಣಿಸಿ' ತಾಯಿ ಈಕೆಯನ್ನು ಸಲಹಿದ್ದಳು. ಇವಳೊಡನೆ ಹುಟ್ಟಿದ ಅಣ್ಣತಮ್ಮಂದಿರು ತಂಗಿ ಯನ್ನು ಮಮತೆಯಿಂದ ಕಂಡಿದ್ದರು. ಆದರೆ ಅತ್ತಿಗೆ ಮನೆಗೆ ಬರುತ್ತಲೇ ಅಣ್ಣನ ಮನಸ್ಸು ಬದಲಾಯಿಸಿತು. ಒಮ್ಮೆ ಅಣ್ಣನು ಮಲ್ಲಿಗೆ ಹೂವನ್ನು ಮನೆಗೆ ತಂದು ತಂಗಿಗೆ ಇಲ್ಲವೆಂದು ಹೇಳಿ ಮಡದಿಗೆ ಅದನ್ನು ಮುಡಿಯಲು ಕೊಟ್ಟನು.

ಅಣ್ಣ ದಂಡಿಗೆ ಹೋದ ದುಂಡು ಮಲ್ಲಿಗೆ ತಂದ
ತಂಗಿ ಕೇಳಿದರೆ ಇಲವೆಂದ ಇಲವೆಂದ
ಮಡದಿ ಕೇಳಿದರೆ ಮುಡಿಯೆಂದ

ಅಣ್ಣನ ವರ್ತನೆ ತಂಗಿಗೆ ತಿಳಿಯಿತು. ಆದರೆ ಆಕೆ ಅದ ಕ್ಕಾಗಿ ಅಣ್ಣನನ್ನು ದೂರಲಿಲ್ಲ. ಅತ್ತಿಗೆಯನ್ನೇ ದೂರಿಗೆ ಗುರಿ ಮಾಡಿದಳು.

ಕಣ್ಣೀಗು ಹುಬ್ಬೀಗು ಭಿನ್ನಭೇದವೇನೆ
ನಾ ನನ್ನ ಅಣ್ಣ ಎರವೇನ ಅತ್ತೀಗಿ
ನಿನ್ನಿಂದ ಅಣ್ಣ ಎರವಾದ

ಈ ತಂಗಿಗೆ ಅತ್ತಿಗೆಯು ಮೇಲೆ ಕೋಪವೇ ಹೊರತು ಅಣ್ಣನ ಮೇಲಿಲ್ಲ. ಕೋಪಕ್ಕೆ ಪ್ರತಿಯಾಗಿ ಹೆಣ್ಣಿಗೆ ಅಣ್ಣ ತಮ್ಮಂದಿರ ಮೇಲೆ ಅಪಾರವಾದ ಪ್ರೇಮವುಂಟು. ತೋಟಕ್ಕೆ ಹೋಗಿ ಊಟದ ಹಂಬಲವನ್ನು ಮರೆತ ಅಣ್ಣನಿಗೆ ತಂಗಿ ಈ ರೀತಿ ಹೇಳುತ್ತಾಳೆ.

ತೋಟಕ್ಕೆ ಹೋದಣ್ಣ ಊಟಕ್ಕೆ ಬರಲಿಲ್ಲ
ತೋಟದ ಹೂವ ತಲೆತುಂಬ ಇಟಕೊಂಡು
ಊಟದ್ಹಂಬಲ ಮರೆತಾನ

ಕೋಪವ್ಯಾಕಣ್ಣಯ್ಯ ಕೊಳ್ಳೊ ಕಾಲಿಗೆ ನೀರು
ಬಾಯ ತಂಬುಲವ ಉಗಳಣ್ಣ ನೀ ಬರುವ
ದಾರೀಯ ನೋಡಿ ಬಡವಾದೆ

ಅಕ್ಕ ತಮ್ಮನನ್ನು ವರ್ಣಿಸುವ ರೀತಿ ಇದು.

ಸರದಾರ ಬರುವಾಗ ಸುರಿದಾವ ಮಲ್ಲೀಗಿ
ದೊರೆ ನನ್ನ ತಮ್ಮ ಬರುವಾಗ ಯಾಲಕ್ಕಿ
ಗೊನೆ ಮುರಿದು ಹಾಲ ಸುರಿದಾವ

ತಮ್ಮನ ಮೇಲೆ ಅಕ್ಕನಿಗಿರುವ ಅಭಿಮಾನ ಈ ಪದ್ಯದಲ್ಲಿ ವ್ಯಕ್ತವಾಗಿದೆ.

ತಾವರಿಯ ಗಿಡಹುಟ್ಟಿ ದೇವರಿಗಿ ನೆರಳಾಯ್ತು
ನಾ ಹುಟ್ಟಿ ಮನಿಗಿ ಎರವಾದೆ ನನ ತಮ್ಮ
ತಾ ಹುಟ್ಟಿ ಮನಿಗಿ ಧಣಿಯಾದ

ಮಮತೆಯ ತಂಗಿಯನ್ನು ಬೀಳ್ಕೊಡುವಾಗ ಅಣ್ಣನ ಕಣ್ಣು ಹನಿಗೂಡುತ್ತದೆ.

ತಂಗೀನ ಕಳುವ್ಯಾನ ತೆವರೇರಿ ನಿಂತಾನ
ಅಂಗೀಲಿ ನೀರು ವರಸ್ಯಾನ ನನ್ನಣ್ಣ
ಇಂದಿಗಿ ತಂಗಿ ಎರವೆಂದ

## ಸಂಗಾತಿ

ಹೆಣ್ಣಿಗೆ ತಾಯಿತಂದೆಗಳಿಂದ ಅಣ್ಣತಮ್ಮಂದಿರಿಂದ ದೊರಕುವ ಪ್ರೇಮವು ಸಂಗಾತಿಯಿಂದ ದೊರಕುವುದಲ್ಲದೆ ದುಃಖಗಳನ್ನು ತೋಡಿಕೊಳ್ಳುವುದರಿಂದ ಆಕೆಗೆ ಸಮಾಧಾನವಾಗುವುದೂ ಉಂಟು. ಎಳೆತನದಲ್ಲಿ ಬೆಳಸಿದ ಈ ಸ್ನೇಹ ಮುಂದಿನ ಜೀವನದಲ್ಲೂ ನಡೆದುಕೊಂಡು ಬರುತ್ತದೆ. ಗೆಳತಿಯರ ಪ್ರೇಮವನ್ನು ಸೂಚಿಸುವ ಒಂದೆರಡು ಪದ್ಯಗಳನ್ನು ಇಲ್ಲಿ ಎತ್ತಿಕೊಟ್ಟಿದೆ. ಇದರಿಂದ ಈ ಸಂಸಾರದ ಚಿತ್ರ ಪೂರ್ತಿಯಾಗುತ್ತದೆ.

ನಾನು ನನ ಗೆಳತಿ ಕೂಡಿ ನೀರಿಗಿ ಹೋಗಿ
ಕುಲವ ಕೇಳ್ಯಾರ ಬಹುಮಂದಿ ಕೇಳಿದರೆ
ಕುಲವೆರಡು ನಮ್ಮ ಮನವೊಂದು

ಸಂಗಾತಿ ಹೆಣ್ಣು ಜಂಬುನೇರಿಲ ಹಣ್ಣು
ಮುಂಗಯ್ಯ ಹಿಡಿದು ನಗಿಸೋಳು ಮುಖಭಾವ
ಮುಂಗಾರ ಮಿಂಚು ಹೊಳೆದ್ಹಂಗೆ

ಮೂಗುತಿ ಮುಂಭಾರ ತುರುಬಿನ ಹಿಂಭಾರ
ಸೇರಿನ ವಂಕಿ ಕೈಭಾರ ನನ ಗೆಳತಿ
ನಾ ಕೊಟ್ಟ ಸೀರೆ ನಿರಿಭಾರ

## ವೈಧವ್ಯ

ಹಿಂದೂ ಸಮಾಜದಲ್ಲಿ ವಿಧವೆಯರ—ಅದರಲ್ಲೂ ಬಾಲ್ಯದಲ್ಲೇ ಗಂಡನನ್ನು ಕಳೆದುಕೊಂಡವರ—ದುಃಖವನ್ನು ಹೇಳಿ ಮುಗಿಸುವಂತಿಲ್ಲ; ಅಳೆದು ತೀರುವಂತಿಲ್ಲ. ಬಾಳಿನ ಹೊಸಲಿನಲ್ಲಿ ಕಾಲಿಡುತ್ತಿರುವಾಗಲೇ ಸಂಸಾರದ ಸುಖದ ಸವಿಯನ್ನು ಅನುಭವಿಸುವ ಅವಕಾಶವನ್ನು ಕಳೆದುಕೊಂಡ ಹೆಣ್ಣುಗಳ ಸಂಕಟವನ್ನು ಏನೆಂದು ವರ್ಣಿಸುವುದು? ಗಂಡನನ್ನು ಕಳೆದುಕೊಂಡ ಅವರು ಇನ್ನುಮುಂದೆ ಗಂಧ ಹಚ್ಚುವಂತಿಲ್ಲ; ಹಣೆಗೆ ಕುಂಕುಮವನ್ನಿಡುವಂತಿಲ್ಲ. ಇವರ ಪಾಲಿಗೆ ಬಂಗಾರವಿಲ್ಲ, ಬಳೆಯಿಲ್ಲ. ತಾಳಿಕರಿಮಣಿಗಳ ಮಾತಂತೂ ದೂರವೇ ಉಳಿಯಿತು. ಹೋಗಲಿ. ಮುತ್ತೈದೆಯೆಂದು ಹೇಳಿಕೊಂಡು ನಾಲ್ಕು ಜನರೆದುರು ತಲೆಯೆತ್ತಿಕೊಂಡು ಓಡಾಡುವುದಕ್ಕುಂಟೇ? ಅಯ್ಯೋ, ಪಾಪ! ಹಾಗೆ ಓಡಾಡುವ ಭಾಗ್ಯ ಇವರ ಪಾಲಿಗೆ ಮುಗಿಲ ಮಲ್ಲಿಗೆ. ಇಂತಹವರನ್ನು ಮಂಗಳಕಾರ್ಯದಲ್ಲಿ ಭಾಗವಹಿಸಲು ಜನರು ಅವಕಾಶಕೊಡರು. ಗಂಡನಿಲ್ಲದ ದುಃಖವನ್ನು ಭರಿಸಲು ಸ್ವಲ್ಪಮಟ್ಟಿಗಾದರೂ ಅವಕಾಶಕೊಟ್ಟು, ಮನಸ್ಸಿಗೆ ಸಮಾಧಾನ ಕೊಡುತ್ತಿದ್ದ ಒಂದು 'ಹೊಟ್ಟೇಯ ಮಾಣಿಕ್ಯ' ವಿಲ್ಲದೆ, ಗಂಡನ ಸುಖದಿಂದ ವಂಚಿತಳಾಗಿ, ಜನರ ಬಾಯಿಗೆ ಬಿದ್ದು, ವಿಧವೆಯಾದವಳು ತನ್ನ ವ್ಯಕ್ತಿತ್ವವನ್ನು ಕಳೆದುಕೊಂಡು ಉಳಿದ ತನ್ನ ದೀರ್ಘವಾದ ಬಾಳನ್ನೆಲ್ಲ 'ಸಾಯದೆಯೆ ಸತ್ತಂತೆ' ನೂಕಬೇಕಾದ ಚಿತ್ರ ಬಲು ಘೋರವಾದುದು. ಈ ವೈಧವ್ಯದ ದುಃಖ ಕೆಳಗಿನ ಎರಡು ಮುಕ್ತಕಗಳಲ್ಲಿ ವ್ಯಕ್ತವಾಗಿರುವಂತೆ ಇನ್ನೆಲ್ಲಿಯೂ ಇಷ್ಟು ತೀವ್ರತಮ

ವಾಗಿ, ಕರುಣಾಜನಕವಾಗಿ ವ್ಯಕ್ತವಾಗಿಲ್ಲ. ಬಾಲವಿಧವೆಯೇ ತನ್ನ ದುಃಖವನ್ನು ತೋಡಿಕೊಳ್ಳಲಿ—

ಗಂಡ ಸತ್ತಾರಿನ್ನು ಗಂಧ ಕುಂಕುಮವ್ಯಾಕ
ಬಂಗಾರ ವ್ಯಾಕ ಬಳಿಯಾಕ ಕೊರಳಿನ
ಸಿಂಗಾರ ಶಿವನ ಕಸಗೊಂಡ

ಮದುವೆಯಾಗಿ ಈಕೆ ಪಟ್ಟ ಸುಖವೇನು ?

ಕಂದೆನೆತ್ತಾಲಿಲ್ಲ ಕೈ ಬೀಸಿ ನಡೆಲಿಲ್ಲ
ಗಂಡನ ಪುಣ್ಯ ಉಣಲಿಲ್ಲ ಶಿವರಾಯ
ರಂಡೆತನಕ್ಹೀಂಗ ಗುರಿಯಾಗಿ

## ಬಂಜೆತನ

ವಿಧವೆಯರದು ಈ ತೆರನಾದ ದುಃಖವಾದರೆ, ಬಂಜೆಯದು ಮತ್ತೊಂದು ರೀತಿಯದು. ಗಂಡನಿದ್ದರೂ ಆಕೆಗೆ ಸುಖವಿಲ್ಲ. ಮಕ್ಕಳಾಗುವ ಸಂಭವವೇ ಇಲ್ಲ ಬಂಜೆಗೆ. ಬಾಡಿಗೆಯ ಎತ್ತು ದುಡಿದಂತೆ ಬೆಳಗಿನಿಂದ ಸಂಜೆಯವರೆಗೂ ಆಕೆ ಮೂಗು ಮುಚ್ಚಿಕೊಂಡು ದುಡಿಯಬೇಕು. ಮನೆಯಲ್ಲಿ ಆಕೆ ನಿತ್ಯವೂ ಯಾರಿಗೂ ತಿಳಿಯದಂತೆ ಸುರಿಸುವುದು ಕಣ್ಣೀರು ; ತಿನ್ನುವುದು ಹಂಗಿನ ಕೂಳು. ಭಿಕ್ಷುಕರು ಅವಳ ಕೈಯಿಂದ ಭಿಕ್ಷೆಯನ್ನು ಸ್ವೀಕರಿಸರು. ಬಂಜೆಯ ಮನೆಯ ಮುಂದೆ ಬೆಳೆದಿರುವ ಅಂಜೂರದ ಗಿಡದ 'ಟೊಂಗಿ ಟೊಂಗೆಲ್ಲ ಗಿಳಿಕೂತು ಬಂಜಿ ಸಿನ ಬದುಕು ಹೆರವರಿಗೆ' ಎಂದು ಹಾಸ್ಯ ಮಾಡುತ್ತವೆಯಂತೆ! ಜನರೆಲ್ಲ ಬಂಜೆಯ ಕಡೆ ಬೆರಳಿಟ್ಟು ತೋರಿಸುತ್ತಾರೆ. ಹೆಚ್ಚೇನು ?

'ಬಾಳಿಲೆಯ ಹಾಸ್ಯಂಡು ಬೀಸಿ ಒಗೆದಾಂಗ್ಹ' ಅವಳ ಬಾಳು ವ್ಯರ್ಥ; ನಿರುಪಯೋಗ ಹಾಗೂ ನಿಷ್ಫಲ. ಬಂಜೆಯೊಬ್ಬಳು ತನ್ನ ದುಃಖವನ್ನು ಹೀಗೆ ತೋಡಿಕೊಂಡಿದ್ದಾಳೆ—

ಬಾಲಕರಿಲ್ಲದ ಬಾಳಿದ್ಯಾತರ ಜನ್ಮ
ಬಾಡೀಗಿ ಎತ್ತು ದುಡಿದಂಗ ಬಾಳಿಲೆಯ
ಹಾಸ್ಯಂಡು ಬೀಸಿ ಒಗೆದಂಗ

ಆದ್ದರಿಂದ ಬಂಜೆಯ ಪ್ರಾರ್ಥನೆ ಈ ರೀತಿಯದಾಗಿರುತ್ತಿತ್ತು.

ಕಂದನ ಕುಡು ಶಿವನೆ ಬಂಧನ ಬಡಲಾರೆ
ಹಂಗೀನ ಬಾನ ಉಣಲಾರೆ ಮರ್ತ್ಯದಾಗ
ಬಂಜೆಂಬ ಶಬುದ ಹೊರಲಾರೆ

## ಮಕ್ಕಳು

ಒಲಿದವರ ಬಾಳಿಗೆ ಬೆಳಕನ್ನೂ ನಲಿವನ್ನೂ ತರುವವರು ಮಕ್ಕಳು. ಮನೆಯಲ್ಲಿ ಬಡತನವೇ ಇರಲಿ ಸಿರಿತನವೇ ಇರಲಿ ಆಡುವ ಮಗುವೊಂದಿದ್ದರೆ ಅದರ ಆಟಪಾಟಗಳಿಂದ ಮನೆ ಬೆಳಗುತ್ತದೆ. ಬೆಳಗಿನಿಂದ ಸಂಜೆಯವರೆಗೂ ದುಡಿದು ಬೇಸತ್ತ ತಾಯಿ ಆಡುವ ಮಗುವನ್ನು ಕಂಡು ಸಮಾಧಾನಗೊಳ್ಳುತ್ತಾಳೆ. ಬಾಳ್ವೆಯ ಒಲೆಯ ಮೇಲೆ ಸುಟ್ಟ ಹಪ್ಪಳದಂತಾಗಿರುವ ತಂದೆ ತಾಯಿಗಳ ಮನಸ್ಸು ಮಕ್ಕಳಿಂದ ಹಗುರವಾಗುತ್ತದೆ. ನಮ್ಮ ಜನರು ಮಕ್ಕಳಿಗೆ ಮನಸೋತಿರುವುದನ್ನು ಈ ಕವಿಗಳು ಹಾಡಿರುವಂತೆ ಇನ್ನಾವ ಕವಿಗಳೂ ಹಾಡಿಲ್ಲ.

ಹೆತ್ತವರಿಗೆ ಹೆಗ್ಗಣ ಮುದ್ದು ಎನ್ನುವಂತೆ ಮಗು ಹೇಗಿದ್ದರೂ ತಾಯಿಗೆ ಅದು ಚಿನ್ನ; ಅದು ಅವಳಿಗೆ ಒಪ್ಪಿಗೆ.

ಅತ್ತು ಕಾಡುವನಲ್ಲ ಮತ್ತೆ ಬೇಡುವನಲ್ಲ
ಎತ್ತಿಕೊಳ್ಳೆಂಬ ಹಟವಿಲ್ಲ ನಿನ್ನಂಥ
ಮಕ್ಕಳಿರಲವ್ವ ಮನಿತುಂಬ

ಕೆನೆಯನ್ನು ಬೇಡಿ ಮಗು ಹಟಮಾಡುತ್ತದೆ.

ಯಾತಕಳುತಾನೆಂದು ಎಲ್ಲರು ಕೇಳೋರು
ಕಾಯದ ಹಾಲ ಕೆನೆ ಬೇಡಿ ಕಂದಯ್ಯ
ಕಾಡಿ ಕೈಯಿಂದ ಇಳಿಯನು

ಅಳುತ್ತಿರುವ ಮಗುವಿನ ಸುಂದರವಾದ ಚಿತ್ರ ಇದು.

ಅಳುವ ಕಂದನ ತುಟಿಯು ಹವಳದಾ ಕುಡಿಹಾಂಗ
ಕುಡಿಹುಬ್ಬು ಬೇವಿನೆಸಳ್ಹಾಂಗೆ ಕಣ್ನೋಟ
ಶಿವನ ಕೈಯಲಗು ಹೊಳೆದ್ಹಾಂಗ

ಈ ಪದ್ಯದಲ್ಲಿ ಬರುವ ಹೋಲಿಕೆಗಳು ಸಹಜವೂ ಸುಂದರವೂ ಆಗಿರುವುವಲ್ಲವೇ?

ಮಗು ಅತ್ತು ತಾಯಿಯ ಕೆಲಸವನ್ನು ಕೆಡಿಸಬಹುದು. ಮನೆಯಲ್ಲಿರುವವರಿಗೆ ಬೇಸರ ಹಿಡಿಸಬಹುದು. ಆದರೆ ತಾಯಿ ಮಾತ್ರ ಮಗುವಿನಲ್ಲಿ ಅದನ್ನು ತಪ್ಪಾಗಿ ಎಣಿಸದೆ ಅದರ ವಿಷಯದಲ್ಲಿ ತನ್ನ ಪ್ರೇಮವನ್ನೇ ವ್ಯಕ್ತಪಡಿಸುತ್ತಾಳೆ.

ಅತ್ತರೆ ಅಳಲವ್ವ ಈ ಕೂಸು ನನಗಿರಲಿ
ಕೆಟ್ಟರೆ ಕೆಡಲಿ ಮನಿ ಕೆಲಸ ಕಂದನಂಥ
ಮಕ್ಕಳಿರಲವ್ವ ಮನಿತುಂಬ

ಮಕ್ಕಳೇ ಬೇಕಾಗಿಲ್ಲ; ಮಕ್ಕಳಾದರೂ ಮಿತಸಂತಾನವಾಗಿರಬೇಕು ಎಂಬ ಭಾವನೆಯನ್ನು ನಮ್ಮ ಜನ ತಿಳಿದಿರಲಿಲ್ಲ.

ಮಕ್ಕಳನ್ನು ಪಡೆಯುವುದು ಒಂದು ಶಾಪವೆಂದು ಈಗಿನ ವಿದ್ಯಾವಂತರು ಪರಿಗಣಿಸುವುದಾದರೆ, ಹಿಂದಿನವರು ಅದು ಈಶ್ವರನು ತಮಗೆ ಕೊಟ್ಟ ವರವೆಂದು ಭಾವಿಸುತ್ತಿದ್ದರು. ಮಕ್ಕಳನ್ನು ಬೆಳೆಸುವುದು ಸಂತೋಷ; ಭಾರದ ಕೆಲಸವಲ್ಲ ಎಂದು ಅವರು ತಿಳಿದಿದ್ದರು.

ಮಗುವಿನ ವಿಷಯದಲ್ಲಿ ತಾಯಿಯ ಮಮತೆ ಈ ಪದ್ಯಗಳಲ್ಲಿ ಮುಗಿಲನ್ನು ಮುಟ್ಟುತ್ತದೆ.

ಆಡಿ ಬಾ ಕಂದಯ್ಯ ಅಂಗಾಲ ತೊಳೆದೇನು
ತೆಂಗೀನ ಕಾಯಿ ತಿಳಿನೀರು ತಕ್ಕೊಂಡು
ಬಂಗಾರ ಪಾದ ತೊಳೆದೇನು.

ಬಾರೋ ಬಾರೋ ನನ್ನ ಬಾಲ ಚಕ್ರವರ್ತಿ
ನಾಲಗೆಯ ಮೇಲೆ ಸರಸೋತಿ ಇರುವಂಥ
ಬಾಲ ಹಾಲ ಕುಡಿ ಬಾರೊ.

ಮಕ್ಕಳ ವಿಷಯದಲ್ಲಿ ಬಯಕೆ ಮನುಷ್ಯಮಾತ್ರಕ್ಕೇ ಸಹಜವಲ್ಲ; ಪಕ್ಷಿಗಳಿಗೂ ಉಂಟು.

ಮಕ್ಕಳ ಪಾಶಕ್ಕೆ ಹಕ್ಕಿ ಕಟ್ಟಿತು ಗೂಡ
ಸಿಕ್ಕಿತ್ತು ಶಿವನ ಬಲೆಯಲ್ಲಿ ಬಲೆಗಾರ
ಮಕ್ಕಳ ತಾಯ ಕೊಲದಿರು

ಇಲ್ಲಿ ಗಮನಿಸಬೇಕಾದ ಅಂಶವೊಂದುಂಟು. ನಮ್ಮ ಜನರಿಗೆ ಮಕ್ಕಳ ಮೇಲಿನ ಪ್ರೇಮ ಹಿರಿದಾದುದಾದರೂ ಅವರಿಗೆ ಗಂಡುಮಕ್ಕಳ ಮೇಲೆ ಪ್ರೇಮವೇ ಹೆಚ್ಚು. 'ತಾಯಿದ್ರೆ ತವರ್ಹೆಚ್ಚು, ತಂದಿದ್ರೆ ಬಳಗ್ಹೆಚ್ಚು, ಸಾವಿರಕೆ ಹೆಚು ಪತ್ಶಿ

ಪುರುಷ, ಹೊಟ್ಟೇಯ ಮಾಣಿಕದ ಮಗ ಹೆಚ್ಚು' ಎಂದು ಮಗನನ್ನೇ ಹೊಗಳುತ್ತಾರೆ 'ಗಂಡು ಮಗ ಗಜಭೀಮ' ಎಂಬುದು ಇವರ ಭಾವನೆ. ಆದರೆ 'ಹೆಣ್ಣು ಹುಟ್ಟಿದ ಮನಿ ಹೆಗ್ಗಣ್ಣ ತ್ತೀದಾಂಗ' ಅಂತೆ! ಮಗ ಮನೆಯಲ್ಲಿ ನಿಲ್ಲತಕ್ಕವನು, ಅವನಿಂದಲೇ ವಂಶದ ಉದ್ಧಾರ, ಹೆಣ್ಣು ಹೊರಗೆ ಹೋಗತಕ್ಕ ವಳು, ಒಳ್ಳೆಯ ಮನೆ ದೊರಕಬೇಕಾದರೆ ಹಣ ವೆಚ್ಚವಾಗು ತ್ತದೆ ಎಂಬ ಭಾವನೆ ಇದಕ್ಕೆ ಮೂಲವಾಗಿರಬಹುದು. ಆದರೆ ಆ ಭಾವವನ್ನು ಅನೇಕರು ಒಪ್ಪುವುದಿಲ್ಲ. ಹೆಣ್ಣು ಹುಟ್ಟಿತಲ್ಲ ಎಂದು ಚಿಂತಿಸಿದ ಅಣ್ಣನಿಗೆ ತಂಗಿ ಸಮಾಧಾನ ಮಾಡುತ್ತಾಳೆ.

ಹೆಣ್ಣು ಹುಟ್ಟಿತು ಎಂದು ಅಣ್ಣ ಚಿಂತಿಸಬೇಡ
ಹಣ್ಣಾಂಗು ಪರರ ಒಡವೆಯ-ತವರ್ಮನೆಯ
ಅಣ್ಣ ಬಾಳೆಂದು ಹರಸ್ಯಾಗು
ಹೆಣ್ಣು ಹುಟ್ಟಿತು ಅಂತ ಹೇಳಿ ಕಳುಹಲಿ ಬ್ಯಾಡ
ಹೆಣ್ಣೆಂದರವರು ಹೆದರ್‍ಯಾರು ಕಂದವ್ವ
ಹೆಣ್ಣಲ್ಲ ನಮಗೆ ರವಿಚಿನ್ನ

ಮಗುವಿನ ಸೊಗಸನ್ನು ವರ್ಣಿಸುವ ಕೆಲವು ಪದ್ಯಗಳಿಂದ ಈ ಭಾಗವನ್ನು ಮುಗಿಸಬಹುದು.

ಎಲ್ಲರ ಮಕ್ಕಳ್ಹಂಗೆ ಅಲ್ಲ ಕಣೆ ನನ್ನಯ್ಯ
ನಲ್ಲರಳುಗಣ್ಣು ನಗುಮುಖ ಕಾಮನ
ಬಿಲ್ಲು ಹೋಲ್ತಾವೆ ಕುಡಿಹುಬ್ಬು
ಕಾಡಿಗ್ಹಚ್ಚಿದ ಕಣ್ಣು ತೀಡಿಮಾಡಿದ ಹುಬ್ಬು
ಮಾವಿನ ಹೋಳು ನಿನ ಕಣ್ಣು ಕಂದಯ್ಯ
ಮಾವ ಬಣ್ಣಿಸಿ ಕರೆದಾನು

ಕೂಸು ಇದ್ದ ಮನೆಗೆ ಬೀಸಣಿಗೆ ಯಾತಕೆ
ಕೂಸು ಕಂದಯ್ಯ ಒಳ ಹೊರಗೆ ಆಡಿದರೆ
ಬೀಸಣಿಗೆ ಗಾಳಿ ಸುಳಿದಾವು

ಮಗುವಿನಿಂದಲೇ ಮನೆಗೆ ಅಲಂಕಾರ.

ಹಾವಿನ ಹೆಡೆ ಚೆಂದ ಮಾವಿನ ಮಿಡಿ ಚೆಂದ
ಹಾರಾಡಿ ಬರುವ ಗಿಳಿ ಚಂದ ಕಂದಯ್ಯ
ನೀ ಚೆಂದ ನಮ್ಮ ಮನಿಗೆಲ್ಲ

ಚೆಲುವೆಯಾದ ಹೆಣ್ಣುಮಗುವಿನ ಚಿತ್ರ ಇದು.

ಕಟ್ಟಾಣಿ ಕಟ್ಯಾಳ ಕಟ್ಟಿ ಮೇಲ್ ನಿಂತಾಳ
ಬಟ್ಟಲಗಣ್ಣು ತಿರುವ್ಯಾಳ ಕಂದಮ್ಮ
ದಿಟ್ಟಿ ಸೋಂಕ್ಯಾವು ಒಳಗ್ಹೋಗು

ಒಂದು ಕ್ಷಣಕಾಲ ಮಗು ಮರೆಯಾದರೆ ತಾಯಿಗೆ ತಳಮಳ.

ಆಡೊ ಮಕ್ಕಳಿರ ಅರಗೀಣಿ ಕಾಣೀರ
ಕಂಡ ಮಕ್ಕಳಿರ ಕರೆತನ್ನಿ ಕಂದಯ್ಯ
ಉಂಡ್ಹೋಗಲಿಲ್ಲ ಹಸಿದಾನ

ಈ ಪದ್ಯಗಳ ಸೊಗಸನ್ನು ಬೇರೆ ವಿವರಿಸಬೇಕಾಗಿಲ್ಲ. ಅವು ಅರುಹನ ಮೂರುತಿಯಂತೆ ನಿರಾಭರಣಸುಂದರವಾದುವು. ಈ ವಿಧವಾದ ಪದ್ಯಗಳು ಜನಪದ ಸಾಹಿತ್ಯದಲ್ಲಿ ನೂರಾರು ಸಿಕ್ಕುತ್ತವೆ. ಇಂಥ ಒಂದೊಂದು ಪದ್ಯವೂ ಒಂದೊಂದು ರತ್ನ.

## ವಿವಿಧ ವಿಷಯುಗಳು

ಜನಪದ ಸಾಹಿತ್ಯ ಪಂಡಿತರ ಪ್ರೌಢಸಾಹಿತ್ಯದಂತೆಯೇ ವಿಸ್ತಾರವೂ ವೈವಿಧ್ಯಪೂರ್ಣವೂ ಆದುದು. ಈ ಬಿಡಿಮುತ್ತುಗಳಲ್ಲಿ ನಾವು ವಿಶೇಷವಾಗಿ ಸಾಂಸಾರಿಕ ಜೀವನದ ಚಿತ್ರಗಳನ್ನೇ ಕಂಡರೂ, ಇವುಗಳನ್ನುಳಿದ ವಿವಿಧ ವಿಷಯುಗಳನ್ನೊಳಗೊಂಡ ಅನುಭವಪೂರ್ಣವಾದ ಪದ್ಯಗಳು ದೊರಕುತ್ತವೆ. ಕವಿಯ ಅನುಭವವೇ ನಮ್ಮ ಅನುಭವವೋ ಎಂಬಂತಿವೆ ಆ ಪದ್ಯಗಳು. ಅವುಗಳ ಸೊಗಸಿಗೆ ಮರುಳಾಗದವರಾರು? ಹೀಗೆ ದೊರಕುವ ಪದ್ಯಗಳಲ್ಲಿ ಸ್ವಾರಸ್ಯವಾದ ಕೆಲವನ್ನು ಆಯ್ದು ಇಲ್ಲಿ ಕೊಟ್ಟಿದೆ.

ಚೆಲುವುಳ್ಳ ಹೆಣ್ಣಿಗೆ ಬಾಯಿಬಿಡದವರಾರು?

ಕೆಂಪಾನೆ ಹೆಣ್ಣಿಗೆ ಸಂಪಿಗೆ ಹೂವಿಗೆ
ಅಂತರದಲಿರುವ ಗಜನಿಂಬೆ ಹಣ್ಣಿಗೆ
ಎಂಥೋರು ಬಾಯ ಬಿಡುವೋರ

ಸಿರಿವಂತರು ಹೇಗೆ ಮಾತನಾಡಿದರೂ ಅದು ಚೆನ್ನೇ.

ಬಡವಿ ಆಡಿದ ಮಾತು ನುಡಿನುಡಿಗೆ ಬೇಸರ
ಒಡವಿ ಇಟ್ಟವ್ವ ಒನೆಒನೆದು ಹೇಳಿದರೆ
ನುಡಿನುಡಿಗೆ ಬಾಯಬಿಡುತಾರೆ

### ಸರಸ

ಕಡಗದ ನನ್ನ ಕೈಯ ಬಿಡು ನನ್ನ ಮಾರಾಯ
ಕಡಸ ಬಂದಾವು ನಮನಿಮಗೆ ವೀಳ್ಯವ
ಮಡಿಚಾಗ ಕಂಡೆ ನಿಮ ಮನವ

## ಹಾಸ್ಯ

ಕೂಸು ಕುಂಚಿಗೆ ತಿಂತು ಹಾಸೀಗೆ ನೆಲ ತಿಂತು
ಬಾವಯ್ನ ಗಡ್ಡ ಇಲಿ ತಿಂತು ಮಿಕ್ಕದ್ದು
ದೀವಳಿಗಿ ಮುಂದೆ ಚಿಗುರೀತು.

## ಸಮಾಧಾನ

ಸಣ್ಣ ಶಾವಿಗಿ ಒಲ್ಲ ಚಿನ್ನಿ ಸಕ್ಕರಿ ಒಲ್ಲ
ಹೆಣ್ಣೆಂಬ ಶಬುದ ಬಿಡವೊಲ್ಲ ನನ ತಮ್ಮ
ಹೆಣ್ಣು ಕೊಡುತೀನಿ ಉಣ ಏಳೊ

## ಅನುಭವಾಮೃತ

ಅಳಿಯ ಬಂದನು ಎಂದು ಬಿಳಿಯ ಹಚ್ಚಡ ತಂದು
ಎಳೆ ಪ್ರಾಯವುಳ್ಳ ಹುಡುಗಿಯ ಇತ್ತರೂ
ಹರಳುಂಗುರೆಂದು ಮುನಿದಾನು

ಅಟ್ಟಡಿಗೆ ಅಳಿಯನಿಗೆ ಇಟ್ಟ ನೀರು ನೆಂಟಗೆ
ಪೆಟ್ಟಿಗೆ ಬಂಗಾರ ಮಗಳಿಗೆ ನಾಳೆ ಬರುವ
ಪತ್ರದ ಸಾಲ ಮಗನೀಗೆ

ಸರಿಗೆ ಪಂಚೆಯನುಟ್ಟು ಬೆರಳಿಗುಂಗುರವಿಟ್ಟು
ಸರಿಯವರ ಕೂಡೆ ಬರುವಾಗ ಸಾಲಗಾರ
ಸೆರಗ್ಹಿಡಿದು ನಿಲಿಸಿ ಬಿಡುವನು

## ಪ್ರಸಂಗಗಳು

ಮೇಲೆ ಹೇಳಿದ ವಿಷಯಗಳನ್ನೊಳಗೊಂಡ ಬಿಡಿಪದ್ಯಗಳನ್ನಲ್ಲದೆ, ಅನೇಕ ಪ್ರಸಂಗಗಳನ್ನು ಈ ಮುಕ್ತಕಗಳು ಚಿತ್ರಿಸುತ್ತವೆ. ಈ ಪ್ರಸಂಗಗಳಲ್ಲಿ ಕೆಲವು ಸಾಂಸಾರಿಕ ಜೀವನದ

ಸರಸವಿರಸಗಳನ್ನು ನಿರೂಪಿಸಿದರೆ ಮತ್ತೆ ಕೆಲವು ಹಾಸ್ಯ ವಿನೋದಗಳನ್ನು ಒಳಗೊಂಡ ಮನರಂಜಕ ಚಿತ್ರಗಳು. ಇನ್ನು ಕೆಲವು ಪ್ರಸಂಗಗಳ ಮೂಲಕ ಅವುಗಳ ಕರ್ತೃಗಳು ನೀತಿಯನ್ನು ಬೋಧಿಸುವಂತೆ ಕಂಡುಬರುತ್ತದೆ. ಈ ತೆರನಾದ ಪ್ರಸಂಗಗಳಲ್ಲಿ ಎರಡನ್ನು ಮಾತ್ರ ಇಲ್ಲಿ ಕೊಟ್ಟದೆ. ಇಲ್ಲಿಯೂ ಸಹೃದಯರು ಊಹೆಯಿಂದ ಸನ್ನಿವೇಶವನ್ನು ಕಲ್ಪಿಸಿಕೊಂಡ ಹೊರತು ಚಿತ್ರವು ಪೂರ್ತಿಯಾಗದು.

(೧) ಸಾಮಾನ್ಯವಾಗಿ ಅಣ್ಣತಂಗಿಯರಿಗಿರುವ ಪ್ರೇಮ ಅತ್ತಿಗೆ ಮನೆಗೆ ಕಾಲಿಡುತ್ತಲೇ ದೂರವಾಗುತ್ತ ಹೋಗುತ್ತದೆ. ಇದಕ್ಕೆ ಮುಖ್ಯವಾಗಿ ಮನೆಗೆ ಬಂದ ಹೆಣ್ಣಿನ ನೀತಿಯೇ ಕಾರಣ. ಅಣ್ಣನ ಹೆಂಡತಿ ಸುಂದರಿ. ಆದ್ದರಿಂದಲೇ ಅಣ್ಣ ಅವಳಿಗೆ ಮರುಳಾಗಿದ್ದಾನೆ. ಮೇಲು ನೋಟಕ್ಕೆ ಅತ್ತಿಗೆ ಬಲು ಒಳ್ಳೆಯವಳಾಗಿ ಕಾಣುತ್ತಾಳೆ. ಆದರೆ 'ಸುಣ್ಣದ ತಿಳಿನೀರ ಒಲಿ ಮುಂದೆ ಇಟಕೊಂಡು ಎಮ್ಮಿಹಾಲೆಂ'ದು ಬಡಿಸುವ ಜಾಣೆ ಅವಳು. ಮನೆಗೆ ಬಂದ ಅತ್ತಿಗೆಯ ಗುಣ, ಗೊತ್ತಿದ್ದರೂ ತಂಗಿ ಮಾತ್ರ ಮನಸ್ಸಿನಲ್ಲಿಯೇ 'ಅತ್ತೀಗಿ ಹಡೆಯಲಿ ಹತ್ತೆಮ್ಮಿ ಕರೆಯಲಿ, ಹಿತ್ತಿಲ ಬಾಳೆ ಚಿಗಿಯಲಿ, ಅತ್ಯೆಂದು ಅತ್ತಿಗೆಯ ಮಗಳು ಕರೆಯಲಿ' ಎಂದು ಹರಸುತ್ತಿರುತ್ತಾಳೆ. ಬೆಳೆದು, ವಿದ್ಯಾವಂತನಾದ ತನ್ನ ಮಗ ತನ್ನ ಅಣ್ಣನ ಮಗಳನ್ನೇ–ಐಶ್ವರ್ಯವಂತರ ಮನೆಯ ಸ್ವರೂಪಿಗಳಾದ ಎಷ್ಟೋ ಹೆಣ್ಣುಗಳು ತಾವಾಗಿಯೇ ಒಲಿದು ಬಂದಿದ್ದರೂ, ಅವರನ್ನೆಲ್ಲ ಬಿಟ್ಟು–ಮದುವೆಯಾಗಬೇಕು ; ಮನೆಗೆ ಸೊಸೆಯಾಗಿ ಬಂದ

ಅಣ್ಣನ ಮಗಳು ತನ್ನನ್ನು ಅತ್ತೆಯೆಂದು ಕರೆಯಬೇಕೆಂಬುದು ತಂಗಿಯ ಹಂಬಲ. ಈ ಆಸೆಯನ್ನು ಈಡೇರಿಸಿಕೊಳ್ಳಲು ಬೆಳೆದ ಮಗನ ತಾಯಿಯೊಬ್ಬಳು 'ಗಂಡು ಹಡದೀನೆಂಬ ಗರುವೀಕಿ' ಯನ್ನು ಬದಿಗೊತ್ತಿ, ಲೋಕರೂಢಿಗೆ ವಿರುದ್ಧವಾಗಿ ಅಣ್ಣನ ಮನೆಗೆ ಹೆಣ್ಣು ಬೇಡಲು ತಾನೇ ಹೊರಟಳು. ಗಂಡನ್ನು ಹುಡುಕುವ ತೊಂದರೆ ತಪ್ಪಿ 'ಅಗ್ಗದಳಿಯ' ದೊರೆತರೆ ಯಾರ ಮನಸ್ಸು ತಾನೆ ನಲಿಯದು ? ತಂಗಿಯ ಪ್ರಾರ್ಥನೆಗೆ ಇನ್ನೇನು ಸಮ್ಮತಿಯನ್ನು ಸೂಚಿಸುವುದರಲ್ಲಿತ್ತು ಅಣ್ಣನ ಮನಸ್ಸು. ಅಷ್ಟರಲ್ಲೇ ಅತ್ತಿಗೆ ಸುಣ್ಣದಿಂದ ತೊಡೆದು ಕನ್ನಡಿಯಂತೆ ಶುಭ್ರವಾಗಿದ್ದ ಗೋಡೆಯ ಮರೆಯಲ್ಲಿ ಕಣ್ಣು ಮಿಟುಕಿಸಿ ಈ ಸಂಬಂಧ ತಮಗೆ ಬೇಡವೆಂದು ಗಂಡನಿಗೆ ತನ್ನ ಅಸಮ್ಮತಿ ಯನ್ನು ಸೂಚಿಸಿದಳು.

ಅಣ್ಣನ ಮನೀಗ ಹೆಣ್ಣಬೇಡಲಿ ಹೋದ<br>
ಕನ್ನಡಿಗೋಡಿ ಮರಿಮಾಡಿ ಅತ್ತೀಗಿ<br>
ಕಣ್ಣು ಚಿವುಟ್ಯಾಳ ಪುರುಷಾಗೆ

ಅತ್ತಿಗೆಯ ಸಂಧಾನವೂ ಅಣ್ಣನ ನಿಸ್ಸಹಾಯಕತೆಯೂ ತಂಗಿಗೆ ತಿಳಿದುಹೋದವು. ಕರುಳಕೂಗು ತಂಗಿಯನ್ನು ಅಣ್ಣನ ಮನೆಯವರೆಗೆ ಕರೆತಂದಿತ್ತು. ಆದರೆ ಈಗ ಆದುವೇನು ? ಅಣ್ಣನಿಗೆ ಮನಸ್ಸಿದ್ದರೂ ಅತ್ತಿಗೆ ತಮ್ಮ ಬಾಂಧವ್ಯವನ್ನು ಮುರಿದಳೇ ಎಂಬ ಕ್ರೋಧವೂ ದುಃಖವೂ ತಂಗಿಯ ಮನಸ್ಸಿನಲ್ಲಿ ಒಂದೇ ಕಾಲದಲ್ಲಿ ಮೂಡಿದವು. ತನ್ನ ಅಭಿಪ್ರಾಯವನ್ನು ಆಕೆ ಸ್ಪಷ್ಟವಾಗಿ ಆದರೆ ಖಂಡಿತವಾಗಿ ಅತ್ತಿಗೆ ನುಡಿದುಬಿಟ್ಟಳು—

ಕಣ್ಣು ಚಿಪ್ರಟೆಲು ಬ್ಯಾಡ ನಿನ್ಹೆಣ್ಣು ನಾನೊಲ್ಲೆ
ಅನ್ನಿಗರ ಮಗಳು ಅತಿ ಥೆ (ಚೆ) ಲುವಿ ಮಾಡಿಕೊಂಡು
ನಿನ್ನೂರು ಮ್ಯಾಲ ಬರುವೇನ

ಕರುಳಿನ ಕರೆಗೆ ಓಗೊಟ್ಟು ರೂಪದಲ್ಲಿ ಬೀಳಾದ ಅಣ್ಣನ ಮಗಳನ್ನು ಮನೆಗೆ ಸೊಸೆಯಾಗಿ ತಂದುಕೊಳ್ಳಲು ತಂಗಿ ಸಿದ್ಧವಾಗಿದ್ದಳು. ಈಗ ಆ ಆಸೆ ದೂರವಾಯಿತು. ಆದರೇನು? ಓದಿದ ತನ್ನ ಮಗನಿಗೆ ಹೆಣ್ಣನ್ನು ಕೊಡದವರಾರು? ಚೆಲುವೆಯೊಬ್ಬಳನ್ನು ಮಗನು ಮದುವೆಯಾಗಿ ಆ ದಿಬ್ಬಣ ಅಣ್ಣನ ಊರಿನ ಮೇಲೆ ಬಂದಾಗ ತನ್ನ ಸೊಸೆಯನ್ನು ನೋಡಿ ಅತ್ತಿಗೆ ಹೊಟ್ಟೆಯುರಿದುಕೊಂಡು, ತನ್ನ ಮಗಳನ್ನು ನಾದಿನಿಯ ಮಗನಿಗೆ ಕೊಟ್ಟಿದ್ದರೆ ಚೆನ್ನಿರುತ್ತಿತ್ತೆಂದು ಆಕೆ ಕುದ್ದುಕೊಳ್ಳುವಂತಾಗಲೆಂದು ತಂಗಿ ನುಡಿಯುತ್ತಾಳೆ.

ಅಣ್ಣನ ನಿಸ್ಸಹಾಯಕತೆ, ಮನೆಯಲ್ಲಿ ಅತ್ತಿಗೆಯ ಪ್ರಾಬಲ್ಯ ಅವಳ ಮಾತ್ಸರ್ಯ ಹಾಗೂ ಕಾರ್ಪಣ್ಯ, ತಂಗಿಯ ಕರುಳಿನ ಕರೆ ಹಾಗೂ ತೌರಿನ ಹಂಬಲ ಇವೆಲ್ಲಾ ಎರಡೇ ತ್ರಿಪದಿಗಳಲ್ಲಿ ಎಷ್ಟು ಸೂಕ್ಷ್ಮವಾಗಿ ಸಹಜವಾಗಿ ಸ್ಪಷ್ಟವಾಗಿ ಪ್ರಕಟವಾಗಿದೆ! ಸಾಹಿತ್ಯ ಜೀವನದ ಪ್ರತಿಬಿಂಬವೆಂಬ ಮಾತು ಈ ಸಂದರ್ಭಕ್ಕೆ ಚೆನ್ನಾಗಿ ಒಪ್ಪುವುದಿಲ್ಲವೇ?

(೨) ಮೇಲಿನ ಪ್ರಸಂಗ ಸಂಸಾರದ ಒಂದು ಮುಖವನ್ನು ನಮಗೆ ಪರಿಚಯಮಾಡಿಕೊಟ್ಟರೆ ಮುಂದಿನ ಒಂದು ಪ್ರಸಂಗ ಅದರ ಇನ್ನೊಂದು ಮುಖವನ್ನು ಚಿತ್ರಿಸುತ್ತದೆ. ಇಲ್ಲಿಯೂ

ಊಹೆಯಿಂದ ಚಿತ್ರವನ್ನು ನಾವು ಪೂರ್ಣಗೊಳಿಸಿಕೊಳ್ಳಬೇಕು. ತಾಯಿಗೆ ಒಬ್ಬನೇ ಮಗ. ತಂದೆ ಶೀರಿಕೊಂಡಿದ್ದ ಕಾರಣ ಅಂಕೆಯಿಲ್ಲದೆ ತಾಯಿಯ ಮಡಲಿನಲ್ಲಿ ಈ ಹುಡುಗ ಬೆಳೆದನು. ತನಗಿದ್ದ ಒಬ್ಬನೇ ಮಗನನ್ನು ತಾಯಿ ಮುದ್ದಿನಿಂದ ಬೆಳೆಸಿದ್ದರೂ ಅವನು ಬೆಳೆದು ವಿದ್ಯಾವಂತನಾಗಿ ವಂಶಕ್ಕೆ ಕೀರ್ತಿಯನ್ನು ತರುವನೆಂದು ತಾಯಿ ಹಂಬಲಿಸಿದ್ದಳು. ತಾಯಿಯ ಈ ಹೆಬ್ಬಯಕೆಯನ್ನು ಹುಡಿಮಾಡಿ, ಈ ಮುದ್ದಿನ ಮಗನು ರಸಿಕಜೀವನದಲ್ಲಿ ಕಾಲಿಟ್ಟಿದ್ದನು. ತಾಯಿಗೆ ಮಗನ ಈ ಹೊರಗಿನ ಬಾಳುವೆ ತಿಳಿಯದು. ಒಂದು ದಿನ ಸಂಜೆ ಈ ರಸಿಕ ಪುತ್ರ ಹೊರಗಿನಿಂದ ಮನೆಯ ಒಳಗಡೆ ಕಾಲಿಟ್ಟಾಗ ಅವನು ಹೊದೆದ ವಸ್ತ್ರದ ಸೆರಗಿನ ಪರಿಮಳ ಮನೆಯನ್ನೆಲ್ಲ ಮುಸುಗಿತ್ತು. ಆಗ ಅರ್ಥವಾಯಿತು ಮಗನ ರಸಿಕಜೀವನದ ಸ್ವರೂಪ. ಮಗನ ವಿಷಯದಲ್ಲಿ ತಾಯಿ ಕಟ್ಟಿಕೊಂಡಿದ್ದ ಗಾಳಿಗೋಪುರ ಒಂದೇ ಬಾರಿಗೆ ನೆಲಕ್ಕೆ ಕುಸಿದುಬಿತ್ತು. ಆದರೆ ಬೆಳೆದ ಮಗನನ್ನು ಗದರಿಕೊಂಡು ತಾಯಿ ಬುದ್ಧಿ ಹೇಳುವುದಕ್ಕುಂಟೇ? ಮಗನು ಕೈಬಿಟ್ಟರೆ ಗತಿಯೇನೆಂದುಕೊಂಡು ಹೆದರಿ ತಾಯಿ ಮೃದುವಾಗಿ ಅವನನ್ನು ಈ ರೀತಿ ಪ್ರಶ್ನಿಸಿದಳು.

ಎಲ್ಲೀಗೆ ಹೋಗಿದ್ದೆ ಯಾವ್ಹೂವ ಮುಡಿದಿದ್ದೆ
ಯಾರ ತೋಳಲ್ಲಿ ಒರಗಿದ್ದೆ ಕಂದಯ್ಯ
ವಲ್ಲಿ ಸೆರಗೆಲ್ಲ ಪರಿಮಾಳ

ತಾಯಿಯ ಮಾತಿಗೆ ಮಗನು ತನ್ನ ತಪ್ಪನ್ನು ಒಪ್ಪಿಕೊಳ್ಳದೆ ತೇಲಿಸಿ ಮಾತನಾಡಿದನು—

ಇಲ್ಲ ಕಾಣವ್ಮ್ಮ ಸುಳ್ಳನ್ನ ಆಡದಿರು
ಕಲ್ಯಾಣಿಗ್ಹೋಗಿ ಮುಖ ತೊಳೆದು ಬರ್‍ವಾಗ
ಮಾವಯ್ನ ಮಗಳು ಬಂದಾಳು

ನಿನ್ನ ಅಣ್ಣನ ಮಗಳೊಡನೆಯೇ ನಾನು ಸರಸವಾಡಿದ್ದು.

ಮಾವಯ್ನ ಮಗಳು ಮರಿದುಂಡಿ ತೋಳಲ್ಲಿ
ಒಂದು ಅರೆಗಳಿಗೆ ಒರಗಿದ್ದೆ ತಾಯವ್ಮ
ನೀ ಒಪ್ಪಿ ತಂದ ಮಡದೀಯ

ಮಗನು ಮರೆಸಿ ಮಾತನಾಡುತ್ತಿರುವುದನ್ನು ತಾಯಿ ಅರಿಯಳೆ? ಮಗನು ಕೈಮೀರಿದನೆಂದು ಅರಿತು ತಾಯಿ ಅವನಿಗೆ ಬುದ್ಧಿ ಹೇಳಿದಳು.

ಬೇಡರಾ ಅಂಗಡಿ ಬಿಡಿಮುತ್ತು ಚಾವಡಿ -
ಬೇಡ ಕಂದಯ್ಯ ದೊರೆ ಮೋಡಿ ಸೂಳೇರ ಸಂಗ
ಬಾಳೂ ಮಕ್ಕಳಿಗೆ ತರವಲ್ಲ.

ತಾಯಿಯ ಮಾತನ್ನು ಕೇಳುವ ಸ್ಥಿತಿಯನ್ನು ಮೀರಿ ಮಗನು ಬಹುದೂರ ಹೋಗಿದ್ದನು. ತನ್ನ ನಡತೆ ಆಕೆಗೆ ತಿಳಿದದ್ದು ; ಆಕೆ ಅವನಿಗೆ ಬುದ್ಧಿ ಹೇಳಿದ್ದು—ಇವು ಅವನ ಆತ್ಮಾಭಿಮಾನಕ್ಕೆ ತುಂಬ ಧಕ್ಕೆಯನ್ನು ತಂದಿದ್ದವು. ತಾಯಿಯ ಮಾತನ್ನು ಕೇಳುತ್ತಲೇ ಅವನು ಆಕೆಯನ್ನು ಗದರಿಕೊಂಡು, ತಾಯಿ ಬಾಯೆತ್ತದಂತೆ 'ಸೂಳೆಗಾರಾನೀಗೆ ಹೇಳವ್ಮ ಬುದ್ಧಿಯ, ಕೇಳೋವನಲ್ಲ ನಿನ ಮಗ' ಎಂದು ಉತ್ತರಕೊಟ್ಟು ಆ ಪ್ರಸಂಗವನ್ನೇ ಮುಗಿಸಿದನು.

ತಾಯಿಯ ಮಮತೆ, ಮಗನ ದುರಭಿಮಾನಗಳು ಈ ಪ್ರಸಂಗದಲ್ಲಿ ಎದ್ದು ಕಂಡರೂ, ಕೊನೆಯಲ್ಲಿ ವ್ಯಕ್ತವಾಗಿರುವ ನೀತಿ ಮುಖ್ಯವಾದುದು. 'ಸೂಳೇರ ಸಂಗ ಬಾಳೊ ಮಕ್ಕಳಿಗೆ ತರವಲ್ಲ' ಎನ್ನುವುದು ಎಂತಹ ಮುತ್ತಿನಂತಹ ಮಾತು! ಆದರೇನು? ನೀತಿ ನೀತಿಯೇ! ಕೀಚಕ ದುರ್ಯೋಧನ ದುಶ್ಶಾಸನರ ಪ್ರವೃತ್ತಿಗಳು ಮನುಷ್ಯನಲ್ಲಿರುವವರೆಗೆ ಮಹಾಭಾರತದ ಸ್ವಾರಸ್ಯ ಹೇಗೆತಾನೆ ಮಂಕಾದೀತು.? ಈ ತೆರನಾದ ಪ್ರಸಂಗಗಳು ಹೇಗೆತಾನೆ ನಡೆಯದೆ ಇದ್ದಾವು? ಆದರೂ ಈ ರೀತಿಯ ಅನುಭವಪೂರ್ಣವಾದ ವಾಕ್ಯಗಳು ನಮ್ಮ ಬಾಳ ಕೈದೀವಿಗೆಗಳು; ಮನನಕ್ಕೆ ಯೋಗ್ಯವಾದುವು. ಅವುಗಳ ಬೆಳಕು, ಕತ್ತಲಲ್ಲಿ ತೆವಳುತ್ತಿರುವ ನಮಗೆ ಎಲ್ಲ ಕಾಲದಲ್ಲಿಯೂ ದಾರಿತೋರುತ್ತಿರಬೇಕು.

ಈ ಪ್ರಸಂಗದ ತ್ರಿಪದಿಗಳಲ್ಲಿ ಬಂದಿರುವ ಕೋಮಲವಾದ ಪದರಚನೆ ಗಮನಾರ್ಹವಾದುದು.

## ನೀತಿ

ಮನುಷ್ಯನ ಬಾಳಿಗೆ ನೀತಿಯೇ ತಳಹದಿ. ಬಾಳನ್ನು ಶುದ್ಧಿ ಹಸನುಮಾಡಿಕೊಳ್ಳಲು ಯೋಗ್ಯವಾದ ಅನೇಕ ನೀತಿವಾಕ್ಯಗಳು ಇಲ್ಲಿ ನಮಗೆ ದೊರಕುತ್ತವೆ. ಕಾವ್ಯದಲ್ಲಿ ನೀತಿಯು ಸ್ಥಾನವೇನೆಂಬುದರ ವಿಷಯದಲ್ಲಿ ಭಿನ್ನಾಭಿಪ್ರಾಯವಿದ್ದರೂ ಕನ್ನಡ ಸಂಸ್ಕೃತಗಳಲ್ಲಿ ನೀತಿಕಾವ್ಯಗಳಿಗೆ ಕೊರತೆಯೇನೂ ಇಲ್ಲ. ನೀತಿಯ ಬೋಧನೆ ಅಪ್ರಿಯವೂ ನೀರಸವೂ ಆದುದೆಂಬುದನ್ನು

ಒಪ್ಪಿದರೂ, ಅದೂ ಕಾವ್ಯಕ್ಕೆ ವಸ್ತುವಾಗಬಹುದೆಂಬುದನ್ನು ನಾವು ಮರೆಯುವಂತಿಲ್ಲ. ಮೇಲಾಗಿ ಕಾವ್ಯಕ್ಕೆ ವಸ್ತುವೇ ಮುಖ್ಯವಲ್ಲ, ರೀತಿಯೂ ತಕ್ಕಮಟ್ಟಿಗೆ ಪ್ರಾಧಾನ್ಯವನ್ನು ಹೊಂದಿರುತ್ತದೆ. ಹಸು ತಿಂದ ಹುಲ್ಲು ಹಾಲಾಗಿ ಅಮೃತವಾಗುವಂತೆ, ಕವಿಯ ಪ್ರತಿಭೆಯಿಂದ ಹೊರಹೊಮ್ಮಿ ಉತ್ತಮ ರೀತಿಯಲ್ಲಿ ಮೂಡಿಬಂದ ನೀತಿಯೂ ಗ್ರಾಹ್ಯವಾಗುತ್ತದೆ. ಸೋಮೇಶ್ವರ ಶತಕ ಸರ್ವಜ್ಞನ ವಚನಗಳು ಜನಪ್ರಿಯವಾಗಿಲ್ಲವೆ? ಇಂತಹ ರಸಮಯವಾದ ನೀತಿವಾಕ್ಯಗಳು ಇಲ್ಲಿ ಎಷ್ಟೊ! ನೀತಿಪೂರ್ಣವಾದ ಕೆಲವು ಮುಕ್ತಕಗಳನ್ನು ಇಲ್ಲಿ ಆಯ್ದುಕೊಟ್ಟಿದೆ.

ದುಷ್ಟರನ್ನು ಕಂಡರೆ ನಾವೇ ಅವರಿಗೆ ದಾರಿಬಿಡುವುದು ಲೇಸು.

ಮದಿಸಿದ್ದ ಆನೆಯ ಮಲಗಿದ್ದ ಹಾವನ್ನು
ಕುದಿರೆಯ ಕುಡಿದು ಬರವೊನ ಕಂಡರೆ
ಹರಿದಾರಿ ಬಿಟ್ಟು ಹರಿದೋಡು.

ಜೂಜು ಕೆಟ್ಟದ್ದು. ಅದು ರಾಜಾಧಿರಾಜರನ್ನು ಕಷ್ಟಕ್ಕೆ ಗುರಿಮಾಡಿತು.

ಜೂಜಾಡಿ ಪಾಂಡವರು ರಾಜ್ಯವ ಸೋತರು
ಜೂಜಾಡಿ ನಳನು ಬಳಲಿದ ಕಂದಯ್ಯ
ಜೂಜಿಗೆ ಮನವ ಬಿಡದೀರು

ಗಂಡಿಸಲ್ಲಾಗಲಿ ಹೆಣ್ಣಿಸಲ್ಲಾಗಲಿ ಗುಣ ಮುಖ್ಯ; ಬಣ್ಣವಲ್ಲ.

ತಪ್ಪೆಂದು ಜನರನ್ನು ಎತ್ಯಾಡದಿರು ಕಂಡ್ಯ
ಕಪ್ಪಾದ ಹಸುವು ಕರೆದರೆ ಆ ಹಾಲು
ಒಪ್ಪೋದು ಹರನ ಪೂಜೆಗೆ

ಸಿರಿತನ ಶಾಶ್ವತವಲ್ಲ ; ಕ್ಷಣಿಕ.

ಬಂಗಾರ ಬಳಿಯಿಟ್ಟು ಬೈಬ್ಯಾಡ ಬಡವರಿಗೆ
ಬಂಗಾರ ನಿನಗೆ ಸ್ಥಿರವಲ್ಲ ಮದ್ಯಾಣ
ಬಸಿಲು ಹೊಳ್ಳುವುದು ತಡವಲ್ಲ

ಮಕ್ಕಳಲ್ಲಿ ಪ್ರೇಮ ತೋರದವರಿಗೆ ಪರಮೇಶ್ವರನ ಅನುಗ್ರಹ ಹೇಗೆತಾನೆ ಆದೀತು. ?

ಅತ್ತ ಮಕ್ಕಳ ಕೈಗೆ ತುತ್ತ್ಕೊಟ್ಟು ಕೊಡಲಿಲ್ಲ
ಮಕ್ಕಳ ಬೇಡಿ ಪರ್ವತಕೆ ಹೋದರೆ
ಮುಕ್ಕಣ್ಣ ಶಿವನು ನಗನೇನ

ಪುಣ್ಯವನ್ನು ಸಂಪಾದಿಸುವ ರೀತಿ ಇದು.

ಹಸುವೀಗಿ ಹಾಲ್ಕೊಟ್ಟು ಶಿಶುವೀಗ ಬೆಣ್ಣೆಕೊಟ್ಟು
ಬಿಸಲೀಗಿ ನಿಂತವರ ನೆರಳೀಗಿ ಕರೆದರೆ
ಅಸವಲ್ಲದ ಪುಣ್ಯ ಮಗನೀಗಿ

ಹೆಂಡತಿಯನ್ನು ತಲೆಯ ಮೇಲೆ ಕೂಡಿಸಿಕೊಂಡಿದ್ದ ತಮ್ಮನಿಗೆ ಅಕ್ಕನು ಈ ರೀತಿ ಬುದ್ಧಿ ಹೇಳುತ್ತಾಳೆ.

ಅಂಜೂರ ಹಣ್ಣೆಂದು ತಂದು ತೂರಲಿ ಬ್ಯಾಡ
ಹೆಂಡರಿಗೆ ಸಲಿಗೆ ಕೊಡಬ್ಯಾಡ ನನ ತಮ್ಮ
ಮುಂದೆ ನಿನ ಮಾತು ನಡಿಯಾವು

ಸಂಸಾರದ ಜೇಗೆಗೆ ಸಿಕ್ಕು ಬಡತನದಲ್ಲಿ ಬಳಲುವವನಿಗೆ ಚಿಂತೆಗಳು ಮುತ್ತಿರುತ್ತವೆ. ಆದರೆ ಚಿಂತೆಮಾಡುವುದರಿಂದ

ಬಂದ ಫಲವೇನು? ಮನುಷ್ಯನ ದೇಹ ಅರ್ಧವಾಗುತ್ತದೆ; ಅಷ್ಟೆ. 'ಈಸಬೇಕು ಇದ್ದು ಜಯಿಸಬೇಕು' ಪಾಂಡವರಿಗೆ ಬಂದ ಕಷ್ಟಕ್ಕಿಂತ ನಮ್ಮ ಕಷ್ಟವೇ? ನಮ್ಮವರು ಕಷ್ಟಬಂದಾಗ ಚಿಂತೆಗೆ ಸ್ಥಳಕೊಡದೆ ರಾಮಾಯಣ ಮಹಾಭಾರತಗಳನ್ನು ಓದಿ ಮನಸ್ಸಿಗೆ ಸಮಾಧಾನ ತಂದುಕೊಂಡರು. ಚಿಂತೆಮಾಡುತ್ತಿದ್ದ ವಳಿಗೆ ಹಿರಿಯರೊಬ್ಬರು ಹೇಳಿದ ಮಾತಿನಲ್ಲಿ ಎಷ್ಟು ಶಕ್ತಿಯಿದೆ?

ಚಿಂತಿ ಮಾಡಲಿ ಬ್ಯಾಡ ಛೀ ಹುಚ್ಚಿ ಹಡೆದವ್ವ
ಚಿಂತ್ಯಾಗ ಕಾಯ ಇಳಿತರ ಪಾಂಡವರ
ಅಂಥವರಿಗುಂಟು ವನವಾಸ

'ಕಾವ್ಯವು ಕಾಂತಾಸಮ್ಮಿತಿಯೆಂದು ಹೇಳುವರಷ್ಟೆ. ಕಾಂತೆಯರ ಮಾತಿನಂತಿರುವದೆ ಕಾವ್ಯವಾದರೆ ಕಾಂತೆಯರ ಮಾತೆ ಕಾವ್ಯದ ಮಾತೆಯಲ್ಲವೆ?'

## ಪ್ರಾರ್ಥನೆ

ಬಡತನ ಸಿರಿತನಗಳು ಶಾಶ್ವತವಲ್ಲ. ಮಾತ್ಸರ್ಯವನ್ನು ತೊರೆದು, ದೇವರು ಕೊಟ್ಟಿದ್ದರಲ್ಲಿ ತೃಪ್ತಿಯನ್ನು ಹೊಂದಿ, ಮನೆ ಹೆಂಡತಿ ಮಕ್ಕಳು ಬಂಧುಬಾಂಧವರಲ್ಲಿ ಪ್ರೀತಿಯನ್ನು ತೋರಿ, ನಾಲ್ಕು ಜನರಿಗೆ ಒಳ್ಳೆಯದನ್ನು ಮಾಡಿ ಲೋಕದ ಕಣ್ಣಿನಲ್ಲಿ ಮೆಚ್ಚಾಗಿ ಬಾಳುವುದಕ್ಕಿಂತ ಮಿಗಿಲಾದ ಭಾಗ್ಯ ಏನಿದೆ? ಹೆಣ್ಣುಮಗಳೊಬ್ಬಳು ತನ್ನ ಬಾಳಿನ ಆದರ್ಶವನ್ನು ತೋಡಿಕೊಳ್ಳುವ ಒಂದೆರಡು ಪದ್ಯಗಳಿಂದ ಈ ಭಾಗವನ್ನು ಮುಕ್ತಾಯಗೊಳಿಸಬಹುದು.

ಮಕ್ಕಳ ಕುಡು ಶಿವನೆ ಮತ್ತೊಂದ ನಾ ಒಲ್ಲೆ
ಹತ್ತು ಮುಂದ್ಯಾಗ ಹರು ನೀರ ತರುವಂಥ
ಮುತ್ತೈದಿತನವ ಕೊಡು ಶಿವನ

ಮಕ್ಕಳು ಮಸಿತುಂಬ ಕಷ್ಟಕ ಒಬ್ಬಳು
ಛತ್ರ ಕೊಡು ಶಿವನೆ ಆಸುಗಾಲ ಮಕ್ಕಳಿಗೆ
ನುಚ್ಚಂಬಲಿ ಮಾಡಿ ಸಲಹೇನ

ಬಡತನ ನನಗಿರಲಿ ಭಾಳ ಮಕ್ಕಳಿರಲಿ
ಮ್ಯಾಗ ಗುರುವಿನ ದಯೆಯಿರಲಿ ನನ ಗುರುವೆ
ಬಡತನದ ಚಿಂತೆ ನಿನಗಿರಲಿ

# ಮುಕ್ತಾಯ

ಒಂದು ಭಾವವನ್ನೋ ಇಲ್ಲವೆ ಒಂದು ಸನ್ನಿವೇಶವನ್ನೋ ತಿಳಿಸುವ ತ್ರಿಪದಿಯ ಛಂದಸ್ಸಿನಲ್ಲಿ ಕಟ್ಟಿರುವ ಕೆಲವು ಮುಕ್ತಕಗಳನ್ನು ಆಯ್ದುಕೊಂಡು ಅವುಗಳ ಸ್ವಾರಸ್ಯವನ್ನಿಲ್ಲಿ ವಿವರಿಸಲಾಯಿತು. ಮಹಾಕವಿಗಳ ಮಹಾಕಾವ್ಯಗಳನ್ನು ಓದಿ ಅವುಗಳ ಸ್ವಾರಸ್ಯವನ್ನು ಸವಿದ ರಸಜ್ಞರಿಗೆ ಇಲ್ಲಿನ ಹಲವು ಪದ್ಯಗಳು ಮಂಕಾಗಿ ರಸಹೀನವಾಗಿ ತೋರಬಹುದು. ಆದರೆ 'ಮೊದಲು ಹುಟ್ಟಿದುದು ಜನವಾಣಿ; ಅದು ಬೆಳೆದು ಪರಿಷ್ಕೃತವಾಗಿ ವೃದ್ಧಿಯಾದುದು ಕವಿವಾಣಿ. ಜನವಾಣಿ ಬೇರು; ಕವಿವಾಣಿ ಹೂವು' ಎಂಬ ಅಂಶವನ್ನು ಯಾರೂ ಮರೆಯಲಾಗದು. ಅಲ್ಲದೆ ಈ ಜನಪದ ಸಾಹಿತ್ಯದ ವಿಸ್ತಾರ ವಿಪುಲ, ವೈವಿಧ್ಯ, ಅನಂತ. ವಿವಿಧ ಛಂದಸ್ಸಿನಲ್ಲಿ ರಚಿತವಾಗಿರುವ ಹಲವಾರು ಪದ್ಯಗಳಲ್ಲಿ ರಸವುಕ್ಕುವಂತೆ ಕಥೆಗಳನ್ನು ಕವಿಗಳು ಕಟ್ಟಿದ್ದಾರೆ.

ಮರೆಯಲಾಗದ ಮಾತುಗಳಲ್ಲಿ ಜನರ ಮನಸ್ಸಿನಲ್ಲಿ ಅಚ್ಚಳಿಯದೆ ನಿಲ್ಲುವಂತೆ ಚಾರಿತ್ರಿಕ ಸಂಗತಿಗಳನ್ನು ಇಲ್ಲಿ ನಿರೂಪಿಸಲಾಗಿದೆ. ಇತಿಹಾಸ ಪುರಾಣಗಳನ್ನೂ ಅದರ ಸಾರವಾದ ಜ್ಞಾನಭಕ್ತಿ ವೈರಾಗ್ಯಗಳನ್ನೂ ಜನಪದ ಸಾಹಿತ್ಯದ ಕವಿಗಳು ಜನರಿಗಾಗಿ ಹಾಡಿ ಅವುಗಳನ್ನು ಮನೆ ಮನೆಗಳಿಗೂ ಕೊಂಡೊಯ್ದು ಅದರ ಸವಿಯನ್ನು ಜನತೆಗೆ ಬೀರಿದ ಇವರ ಕಾರ್ಯವನ್ನು ನಾವು ಮೆಚ್ಚಲೇಬೇಕಲ್ಲವೇ? ‘ಜನರಿಂದ ಹುಟ್ಟಿ ಜನರಲ್ಲಿಯೇ ಪಳಗಿ, ಜನರ ಪ್ರೇಮವನ್ನು ಸೂರೆಗೊಂಡು ಜನರ ಜೀವನದ ಸಾರವನ್ನೂ ಹೆಂಗಸರ ಮಧುರ ಕಂಠದ ಗಾನವನ್ನೂ ಸುರಿಸುವ ಈ ಸಾಹಿತ್ಯವನ್ನು ಅರಸಿಕರಾದವರು ಅಲ್ಲಗಳೆಯಬಹುದೇ ಹೊರತು ನಿಸರ್ಗ ಕವಿಗಳೂ ರಸಜ್ಞರೂ ಜನತಾವತ್ಸಲರೂ ಎಂದಿಗೂ ತಿರಸ್ಕರಿಸಲಾರರು.’ ಇದರ ಸ್ವಾರಸ್ಯವನ್ನೂ ರಸಪ್ರವಾಹವನ್ನೂ ಅರಿಯಬೇಕಾದರೆ ತಕ್ಕ ಸಾಧನ ಸಾಹಿತ್ಯದಿಂದ ಬಲ್ಲವರು ಇದನ್ನು ಹಾಡಬೇಕು.

ರಸಿಕರಿಗೊಂದು ಹಬ್ಬವೆನಿಸುವ ಈ ಸಾಹಿತ್ಯದ ಕೆಲವು ಗುಣಗಳನ್ನು ಇಲ್ಲಿ ಸಂಗ್ರಹವಾಗಿ ನಿರೂಪಿಸಬಹುದು. ಜನಜೀವನದಲ್ಲಿ ಅಡಗಿರುವ ಸೌಂದರ್ಯವನ್ನು ಮಾತುಗಳಲ್ಲಿ ಸೆರೆಹಿಡಿಯುವುದೇ ಸಾಹಿತ್ಯವೆಂಬ ಮಾತು ಈ ಸಾಹಿತ್ಯಕ್ಕೆ ಎಷ್ಟು ಚೆನ್ನಾಗಿ ಒಪ್ಪುವುದೆಂಬುದನ್ನು ಈಗಾಗಲೇ ಹೇಳಿದ್ದಾಯಿತು. ಈಗ ಈ ಹಾಡುಗಳನ್ನು ಕಟ್ಟಿರುವ ರೀತಿಯನ್ನು ಕುರಿತು ಒಂದೆರಡು ಮಾತು. ಜನಪದ ಸಾಹಿತ್ಯದ ಕವಿತೆ ಅನುಭವದ ಕವಿತೆ. ತಮ್ಮ ಅನುಭವಕ್ಕೆ ಬಾರದ ವಿಷಯಗಳನ್ನು ಈ ಕವಿ

ಗಳು ನಿರೂಪಿಸರು. ತಿಳಿಯಾದ ಇಂಪಾದ ಹುರುಳಾದ ಕನ್ನಡ ನುಡಿಯಲ್ಲಿ ಇಲ್ಲಿಯ ವಿಷಯ ನಿರೂಪಣೆ ಸಾಗುತ್ತದೆ. ಭಾಷೆ ಒಮ್ಮೊಮ್ಮೆ ಒರಟೆಂದು ಕಂಡುಬಂದರೂ ಅದರಲ್ಲಿ ಸತ್ವವುಂಟು. ತೌರಿಗೆ ಹೋಗಬೇಕೆಂದು ಕಾಡಿದ ಹೆಂಡತಿಯನ್ನು ಪ್ರಾಯದ ತರುಣನು ಕೋಪದ ಭರದಲ್ಲಿ ಬಡಿದನಂತೆ! ಈ ಮಾತು ಒರಟು ನಿಜ; ಆದರೆ ಅದರ ಸತ್ವವೆಷ್ಟು! ಆದರೆ ಅದರ ಮುಂದಿನ 'ಮನದಾಗೆ ಮರುಗ್ಯಾನ' ಎಂಬ ಮಾತು ಕೋಪದ ಉಕ್ಕಿದ ಭರ ಇಳಿದು ಪ್ರೇಮದ ನಲ್ಲೆಯ ವಿಷಯದಲ್ಲಿ ಉಂಟಾದ ಪಶ್ಚಾತ್ತಾಪವನ್ನು ಎಷ್ಟು ಕೋಮಲವಾಗಿ ನಿರೂಪಿಸುತ್ತದೆ! ಈ ಪದ್ಯಗಳಲ್ಲಿ ಬರುವ ಸಂಸ್ಕೃತ ಪದಗಳೂ ಅತ್ಯಲ್ಪ. ಹಾಗೆ ಒಮ್ಮೊಮ್ಮೆ ಸಂಸ್ಕೃತ ಪದಗಳು ಇಲ್ಲಿ ಇಣಿಕಿದರೂ ಅವು ತದ್ಭವಗಳಾಗಿಯೋ ಇಲ್ಲವೆ ಎಲ್ಲರಿಗೂ ತಿಳಿಯುವ ಪದ ಗಳಾಗಿಯೋ ಇರುತ್ತವೆ. ಇದರಿಂದ ಪದಗಳನ್ನು ಅರ್ಥಮಾಡಿ ಕೊಳ್ಳುವ ಕ್ಲೇಶ ತಪ್ಪಿ, ನಮ್ಮ ಗಮನವೆಲ್ಲವನ್ನೂ ಪದ್ಯದ ಸ್ವಾರ ಸ್ಯದ ಗ್ರಹಿಕೆಯ ಕಡೆಗೇ ತಿರುಗಿಸಬೇಕಾಗುತ್ತದೆ. ಮೇಲಾಗಿ ಜನಪದ ಸಾಹಿತ್ಯ ಅಪೂರ್ವ ಕನ್ನಡ ಪದಗಳ ಶಬ್ದಕೋಶ. ಎಳಿಲ (ತಿರಸ್ಕಾರ), ಒಗೆತನ (ಸಂಸಾರ) ಚಿತ್ತಾಕ (ಚಿಂತಾಕ, ಒಂದು ಬಗೆಯ ಆಭರಣ) ಶಿವಡು (ದಿಣ್ಣೆ), ಬಣ್ಣ (ಸೀರೆ), ಪಿಲ್ಲೆ (ಹೆಣ್ಣುಮಕ್ಕಳ ಕಾಲಿನ ಆಭರಣ), ಭಾಗಾದಿ (ದಾಯಾದಿ), ಹುಡುದಿ (ಗೊಂಡಲ), ಮಿಂದೂಟ (ಮಿಂದ+ ಊಟ. ಹೆಣ್ಣು ಮೊದಲ ಬಾರಿ ನೆರೆದಾಗ ನಾಲ್ಕನೆಯ ದಿನ ಸ್ನಾನಮಾಡಿದಾಗ ಮಾಡಿಸುವ ಔತಣ)—ಇಂಥ ಅಪೂರ್ವ

ಪದಗಳು ಇಲ್ಲಿ ಎಷ್ಟೊಂದು ಸಿಕ್ಕುತ್ತದೆ! ಆದರೆ ಅವುಗಳನ್ನು ಹುಡುಕುವ ತಾಳ್ಮೆ ಮಾತ್ರ ನಮಗಿರಬೇಕು. ಅಷ್ಟೇ ಅಲ್ಲ. ಮನುಷ್ಯ ಜೀವನದ ಅನುಭವದ ಸಾರ ಇಲ್ಲಿಯ ಗಾದೆಯ ರೂಪದಲ್ಲಿ ರೂಪುಗೊಂಡಿರುತ್ತದೆ. 'ಚಿಂತ್ಯಾಗಕಾಯ ಇಳಿತರ' 'ಬಾಳೊ ಮಕ್ಕಳಿಗೆ ಸೂಳೇರ ಸಂಗ ತರವಲ್ಲ' 'ಗಂಜೀಯ ಕುಡಿದರು ಗಂಡನ ಮನಿ ಲೇಸು.' 'ಮಂದೇನ ಕೊಟ್ಟೇತು ಮನವೇನ ಪಣದೀತ' 'ಹಡೆದಂಥ ತಂದೆತಾಯೆಲ್ಲಿ ಸಿಕ್ಯಾರ' 'ಅಣ್ಣನ ಹೆಂಡತಿ ಕಣ್ಣೀಗಿ ಒಳ್ಳೆವಳು' 'ತಾಯಿದ್ರೆ ತವರ್ಹೆಚ್ಚು, ತಂದಿದ್ರ ಬಳಗ್ಹೆಚ್ಚು, ಸಾವಿರಕೆ ಹೆಚ್ಚು ಪತಿಪುರುಷ' ಎಷ್ಟೊಂದು ಉದಾಹರಣೆಗಳು! ಪಂಡಿತಸಾಹಿತ್ಯದಲ್ಲಿ ಇಂಥ ಉದಾಹರಣೆಗಳನ್ನು ಹುಡುಕಬೇಕು; ಇಲ್ಲಿ ಅವುಗಳನ್ನು ಬಿಡಲು ಮಿಡುಕಬೇಕು. ಹೆಚ್ಚೇನು? ಜನಪದ ಸಾಹಿತ್ಯ ಗಾದೆಗಳ ಭಂಡಾರ.

ಈ ಸಾಹಿತ್ಯದಲ್ಲಿ ಕಂಡುಬರುವ ಅಲಂಕಾರಗಳ ಭಾವನೆಗಳ ವಿಷಯವಾಗಿ ಒಂದೆರಡು ಮಾತುಗಳನ್ನು ಹೇಳಿ ಈ ಭಾಗವನ್ನು ಮುಗಿಸಬಹುದು. ಹೇಳುವ ವಿಷಯವನ್ನು ಸ್ಪಷ್ಟಪಡಿಸಲು ಈ ಕವಿಗಳು ಉಪಮೆ, ರೂಪಕ, ದೃಷ್ಟಾಂತ ಇವೇ ಮೊದಲಾದ ಬಳಕೆಯಲ್ಲಿರುವ ಅಲಂಕಾರಗಳನ್ನೇ ಬಳಸುತ್ತಾರೆ. ಆದರೆ ಇಲ್ಲಿ ನಾವು ಗಮನಿಸಬೇಕಾದ ಅಂಶವೂ ಒಂದುಂಟು. ಅದೇನೆಂದರೆ ಇಲ್ಲಿ ಬರುವ ಹೋಲಿಕೆಗಳು ನಮ್ಮ ಸುತ್ತಲ ಪ್ರದೇಶದಲ್ಲಿ ನಾವು ಕಂಡು ಅನುಭವಿಸಿದವುಗಳೇ ಆಗಿರುತ್ತವೆ. ಕಂಡು ಕೇಳದ ಗಂಧರ್ವಲೋಕದಲ್ಲಿರುವ ಎರಡು ಪದಾರ್ಥ

ಗಳಿಗೆ ಹೋಲಿಕೆಯನ್ನು ಕಲ್ಪಿಸುವುದಿಲ್ಲ. ನೆನಪಿಗೆ ಬಂದ ಒಂದೆರಡು ಉದಾಹರಣೆಗಳನ್ನು ಇಲ್ಲಿ ಎತ್ತಿ ಕೊಡಬಹುದು. ತಾಯಿ ಮಕ್ಕಳ ದನಿ 'ತಾಳಬಾರಿಸಿದಂಗೆ' 'ಜೋಡಿ ಕಿನ್ನರಿ ನುಡಿದ್ಹಾಂಗ' ಯಂತೆ! ಕೋಪಗೊಂಡ ಗಂಡನ ನೋಟ ಹೆಂಡತಿಗೆ 'ಬಟ್ಟಲ ಕಣ್ಣಿನಂತೆ' ಕಂಡಿತು. ಅಳುವ ಕಂದನ ತುಟಿ ರಕ್ತದಿಂದ ಕೆಂಪಾಗಿ 'ಹವಳದ ಕುಡಿಹಾಂಗೆ' ಕಾಣುತ್ತದೆ. ಹುಬ್ಬು 'ಬೇವಿನೆಸಳಂಗೆ' ಮನೋಹರವಾಗಿರುತ್ತವೆ. ಮಗುವಿನ ಕಣ್ಣಿನ ನೋಟವೋ 'ಶಿವನ ಕೈಯಲಿಂಗ ಹೊಳೆದಂಗೆ.' ಇಲ್ಲಿ ಬರುವ ಬಹೂಪಮೆಯನ್ನು ನಾವು ಮೆಚ್ಚತಕ್ಕದ್ದೇ. ತುಂಗಭದ್ರೆಯ ಆಚೆಯ ದಂಡೆಯಲ್ಲಿ ಜೋಳದ ಬೆಳೆ ಹೇಗಿದೆಯೆಂದು ಕೇಳಿದ ತಂಗಿಗೆ ಅಣ್ಣ ಈ ರೀತಿ ಉತ್ತರಕೊಡುತ್ತಾನೆ. ಮಳಿ ಭಾಳ, ಅಕ್ಕ ಬೆಳಿ ಭಾಳ, ನಿನ ಕೊರಳಾಗಿನ ಬಿಳಿ ಮುತ್ತಿನಂತೆ ಬಿಳಿಜೋಳ.' ಬೆಳ್ಳಗೆ ದೊಡ್ಡದಾಗಿರುವ ಉತ್ತರ ಕರ್ನಾಟಕದ ಬಿಳಿ ಜೋಳವನ್ನು ನೋಡಿದವರಿಗೆ ಈ ಮಾತಿನ ಸೊಗಸು ಅರ್ಥವಾಗುತ್ತದೆ. ಸಹಜವೂ ಸುಂದರವೂ ಆದ ಈ ಹೋಲಿಕೆಗಳು ಯಾರ ಮನಸ್ಸನ್ನು ತಾನೆ ಉಲ್ಲಾಸಗೊಳಿಸವು? ಹಾಗೆಯೇ ಈ ಮುಕ್ತಕಗಳಲ್ಲಿ ಬರುವ ದೃಷ್ಟಾಂತಗಳು ಮನೋಜ್ಞವಾಗಿರುತ್ತವೆ. 'ತಾಯಿ ಮಕ್ಕಳ ಜಗಳ ನ್ಯಾಯ ಮಾಡುವವರಾರು? ವಾಲೀಗಿ ಮುತ್ತು ವಜನೇನ?' ಎನ್ನುವುದು ಒಂದು ಸಣ್ಣ ಉದಾಹರಣೆ.

ವರ್ಣನೆಗಳ ವಿಷಯವಾಗಿ ಒಂದು ಮಾತು. ಈ ಬಿಡಿ ಪದ್ಯಗಳಲ್ಲಿ ವಿಸ್ತಾರವಾದ ವರ್ಣನೆಗೆ ಅವಕಾಶವಿರುವುದಿಲ್ಲ.

ಒಂದೆರಡು ಮಾತುಗಳಲ್ಲಿ ಚಿತ್ರವನ್ನು ಪೂರ್ಣಗೊಳಿಸುವ ಶಕ್ತಿ ಈ ಕವಿಗಳಿಗುಂಟು. ಹಳ್ಳಿಯಲ್ಲಿ ಸುಣ್ಣ ಹೊಡೆದು ಶುಭ್ರವಾದ ಗೋಡೆಗಳು 'ಕನ್ನಡಿ ಗೋಡೆ' ಗಳಂತಿರುತ್ತವೆ. ಮೋಡವಿಲ್ಲದ ವಜ್ರದಂತೆ ಹೊಳೆಯುವ ಶುಕ್ರನನ್ನು ಒಳಗೊಂಡ ಬೆಳಗಿನ ವರ್ಣನೆ ಇದು—

ಬೆಳ್ಳಗೆ ಬೆಳಗಾಗಿ ಬೆಳ್ಳಿಮೂಡಲವಾಗಿ
ಒಳ್ಳೊಳ್ಳೇ ಮೀನ ಗರಿ ತೆಗೆದು ಆಡ್ಯಾವ
ಗರತಿ ಸಂಗವ್ವನ ಉಡಿಯಾಗ

ಶುಭ್ರವಾದ ತಿಳಿನೀರಿನಿಂದ ಕೂಡಿದ ನದಿಯ ನೀರಿನಲ್ಲಿ ಆಡುವ ಮೀನುಗಳಿಂದ ಈ ಚಿತ್ರ ಪೂರ್ಣಗೊಳ್ಳುತ್ತದೆ. ಹಾಗೆಯೇ ಗಿಣಿಯನ್ನು ವರ್ಣಿಸುವ ಪದ್ಯ ಇದು. ಒಂದೆರಡು ರೇಖೆಗಳಿಂದಲೇ ಪೂರ್ಣಗೊಳ್ಳುವ ಚಿತ್ರದಂತಿದೆ ಈ ವರ್ಣನೆ.

ಹಚ್ಚನ ಮೈಯವ ಹವಳದ ತುಟಿಯವ
ಎತ್ತ ಹೋಗಿದ್ಯೋ ಗಿಣಿರಾಮ ತವರವರ
ಉತ್ತತ್ತಿ ಬನಕೆ ಉಲುವಿಲ್ಲ

ಇಷ್ಟು ಮೋಹಕವಾದ ಜನಪದ ಸಾಹಿತ್ಯವೂ ರಾಮಾಯಣ ಮಹಾಭಾರತಗಳಂತೆ ನಮ್ಮ ಹಿರಿಯರು ನಮಗೆ ಬಿಟ್ಟುಹೋಗಿರುವ ಆಸ್ತಿ. ನಮ್ಮ ಜನರ ಬಾಯಿಂದ ಹೊರಬಿದ್ದ ಈ ಮುಕ್ತಕಗಳನ್ನು ನಾವು ತೊಟ್ಟು ನಲಿದು ಅವು ನಾಶವಾಗದಂತೆ ನೋಡಿಕೊಳ್ಳಬೇಕು. ಜನತೆಯ ಪರವಾಗಿ ಈ ಸಾಹಿತ್ಯವನ್ನು ಸಂಗ್ರಹಿಸಿ ಪ್ರಕಟಿಸುವ ಹೊಣೆಯನ್ನು ನಾವು ಹೊರಬೇಕು. ಏಕೆಂದರೆ

ಬದುಕನ್ನು ತಿದ್ದಿ ಸಂಸ್ಕಾರಗೊಳಿಸಿ ಆನಂದವನ್ನು ಕೊಡುವ ಗುಣ ಆ ಸಾಹಿತ್ಯದಲ್ಲಿದೆ.

ಕಲ್ಲ ಕೊಟ್ಟವ್ವಗೆ ಎಲ್ಲ ಭಾಗ್ಯವು ಬರಲಿ
ಪಲ್ಲಕ್ಕಿ ಮೇಲೆ ಮಗ ಬರಲಿ ಆ ಮನೆಗೆ
ಮಲ್ಲೀಗೆ ಮುಡಿಯೊ ಸೊಸೆ ಬರಲಿ

ಆಡಾವ ಸಮ ಜೋಳ ಉಳಿದಾವ ಸಮ ಹಾಡು
ಈಗ ಸಾಕವ್ವ ನಿನ ಕಲ್ಲು ಕೈಯಾಗ
ಹಾಕಿದುಂಗುಸ ಸವಿದಾವ

---

# ಕೆಲವು ಉಪಯುಕ್ತ ಗ್ರಂಥಗಳು

೧. **ಗರತಿಯ ಹಾಡು**—ಸಂಗ್ರಾಹಕರು: ಹಲಸಂಗಿಯ ಚೆನ್ನಮಲ್ಲಪ್ಪ, ಲಿಂಗಪ್ಪ, ರೇವಪ್ಪ ಮೊದಲಾದ ಗೆಳೆಯರು. ಶ್ರೀ, ಬೇಂದ್ರೆ, ಮಾಸ್ತಿಯವರ ಪ್ರಸ್ತಾವನೆ, ಪರಿಚಯ, ಆಶೀರ್ವಾದಗಳೊಡನೆ.

೨. **ಮಲ್ಲಿಗೆ ದಂಡೆ**—ಸಂಗ್ರಾಹಕರು: ಕಾಪಸೆ ರೇವಪ್ಪನವರು, ಹಲಸಂಗಿ. ಮಧುರಚೆನ್ನರ ಮುನ್ನುಡಿಯೊಡನೆ.

೩. **ಹಳ್ಳಿಯ ಹಾಡುಗಳು**—ಗೊರೂರು ರಾಮಸ್ವಾಮಿ ಐಯಂಗಾರ್ ಮತ್ತು ಬಿ. ಎನ್. ರಂಗಸ್ವಾಮಿ.

೪. **ಹಳ್ಳಿಯ ಬಾಳು**—ಗೊರೂರು ರಾಮಸ್ವಾಮಿ ಐಯಂಗಾರ್.

೫. **ಕರ್ಣಾಟಕ ಜನಪದ ಸಾಹಿತ್ಯ**—ಮಾಸ್ತಿ ವೆಂಕಟೇಶ ಐಯಂಗಾರ್.

೬. **ಹೆಣ್ಣುಮಕ್ಕಳ ಪದಗಳು**—ತೀ. ನಂ. ಶ್ರೀಕಂಠಯ್ಯ.

೭. **ನಾಡ ಪದಗಳು**— ಆಯ್ದವರು: ಮತಿಘಟ್ಟ ರಾಮಸ್ವಾಮಿ ಮತ್ತು ಕೃಷ್ಣಮೂರ್ತಿ. ಸಂಪಾದಕರು: ಎಲ್. ಗುಂಡಪ್ಪ, ಶ್ರೀಯವರ ಮುನ್ನುಡಿಯೊಡನೆ.

೮. **ಜಾನಪದ ಗೀತಗಳು**—ಸಂಗ್ರಾಹಕರು: ಎಂ. ಜೀವನ.

---

೨೫. ಎಲ್ಲೋರ ಮತ್ತು ಅಜಂತಾ–ಎಂ. ಹೆಚ್. ಕೃಷ್ಣ, ಎಂ.ಎ., ಡಿ.ಲಿಟ್.
೨೬. ಸಾರಜನಕದ ಮಹತ್ವ–ಹೆಚ್. ಸುಬ್ಬಾಜೋಯಿಸ್, ಎಂ.ಎಸ್.ಸಿ.
೨೭. ಭಾಸ—ಹೆಚ್. ಎಲ್. ಹರಿಯಪ್ಪ, ಎಂ.ಎ.
೨೮. ಪಾಶ್ಚಾತ್ಯರಾಜಕೀಯತತ್ವಗಳು–ಎಂ. ಯಾಮುನಾಚಾರ್ಯ ಎಂ.ಎ.
೨೯. ಸರ್ವಜ್ಞಕವಿ—ಎ. ಆರ್. ಕೃಷ್ಣಶಾಸ್ತ್ರೀ, ಎಂ.ಎ.
೩೦. ರಕ್ತ—ಡಿ. ಶಾಮಣ್ಣ, ಬಿ.ಎ., ಎಂ.ಬಿ.ಬಿ.ಎಸ್.
೩೧. ಇಂಗ್ಲಿಷ್ ಪ್ರಬಂಧಗಳು—ಎಸ್. ಮಂಜುನಾಥ್, ಎಂ.ಎ.
೩೨. ಅಕ್ಕಮಹಾದೇವಿ—ಎಸ್. ವಿ. ಪರಮೇಶ್ವರಭಟ್ಟ, ಎಂ.ಎ.
೩೩. ಗಣಿತಶಾಸ್ತ್ರದ ಸ್ವರೂಪ—ಸಿ. ಎನ್. ಶ್ರೀನಿವಾಸ ಅಯ್ಯಂಗಾರ್, ಡಿ.ಎಸ್‌ಸಿ.,
೩೪. ಋಗ್ವೇದ—ಎಂ. ಎ. ಕೃಷ್ಣಸ್ವಾಮಿ, ಎಂ.ಎ.
೩೫. ಕುಮಾರವ್ಯಾಸ ವಾಣಿ—ಎಸ್. ವಿ. ರಂಗಣ್ಣ, ಎಂ.ಎ.
೩೬. ಆಳ್ವಾರುಗಳು—ಎಂ. ಯಾಮುನಾಚಾರ್ಯ, ಎಂ.ಎ.
೩೭. ಹಿಂದು ಮುಸ್ಲಿಂ ಮೈತ್ರಿಯನ್ನು ಬೆಳಸಿದ ರಾಜರು— ವಿ. ರಾಘವೇಂದ್ರರಾವ್, ಎಂ.ಎ., ಬಿ.ಟಿ.
೩೮. ಸುಭಾಷಿತ ಸಂಗ್ರಹಗಳು–ಎಂ. ಪಿ. ಲಕ್ಷ್ಮೀನರಸಿಂಹಶಾಸ್ತ್ರಿ, ಎಂ.ಎ.
೩೯. ಮಕ್ಕಳ ಭಾವಜೀವನ—ಬಿ. ಕುಪ್ಪುಸ್ವಾಮಿ ನಾಯಿಡು, ಎಂ.ಎ.
೪೦. ಸಹಕಾರ—ಎಸ್. ಗೋಪಾಲಸ್ವಾಮಿ, ಎಂ.ಎ.
೪೧. ನಯಸೇನ—ಜಿ. ವೆಂಕಟಸುಬ್ಬಯ್ಯ, ಎಂ.ಎ., ಬಿ.ಟಿ.
೪೨. ಕೌಟಿಲ್ಯ—ಡಾ|| ಎಂ. ವಿ. ಕೃಷ್ಣರಾವ್, ಎಂ.ಎ., ಬಿ.ಟಿ.
೪೩. ತೆಲಗು ಚಾಟುಪದ್ಯಗಳು—ಕೆ. ವೆಂಕಟರಾಮಪ್ಪ, ಎಂ.ಎ.
೪೪. ಮುನಿಸಿಪಾಲಿಟಿಗಳು—ಹೆಚ್. ಕೃಷ್ಣರಾವ್, ಎಂ.ಎ.
೪೫. ಲಕ್ಷ್ಮೀಶ—ಎನ್. ಅನಂತರಂಗಾಚಾರ್, ಎಂ.ಎ., ಬಿ.ಟಿ.
೪೬. ರುಚಿ—ಎಸ್. ವಿ. ರಂಗಣ್ಣ, ಎಂ.ಎ.
೪೭. ಕೀಟಗಳು—ಡಿ. ಎಸ್. ವೀರಯ್ಯ, ಎಂ.ಎಸ್‌ಸಿ.,
೪೮. ಅಲೆಗಳು–ಶೇಷಾದ್ರಿ ಅಯ್ಯಂಗಾರ್, ಎಂ.ಎಸ್‌ಸಿ., ಎಲ್‌ಎಲ್.ಬಿ.
೪೯. ಮುದ್ರಣ—ತ. ಸು. ಶಾಮರಾವ್, ಎಂ.ಎ.
೫೦. ಐವರು ಭೌತವೈಜ್ಞಾನಿಕರು—ಬಿ. ಎ. ಕೃಷ್ಣಸ್ವಾಮಿರಾವ್, ಎಂ.ಎಸ್‌ಸಿ.
೫೧. ಕೃತಕ ರೇಷ್ಮೆ—ಎಂ. ಷಡಕ್ಷರಸ್ವಾಮಿ, ಎಂ.ಎಸ್‌ಸಿ.
೫೨. ಚೀನರ ಇತಿಹಾಸ ಮತ್ತು ನಾಗರಿಕತೆ— ಎಸ್. ವೆಂಕಟದೇಶಿಕಾಚಾರ್, ಎಂ.ಎ

೫೩. ಯುದ್ಧಕಾಲದ ಆರ್ಥಿಕ ಸಮಸ್ಯೆಗಳು—
ಎಸ್. ಲಕ್ಷ್ಮೀನರಸಿಂಹನ್, ಎಂ.ಎ.

೫೪ ಆಹಾರ—ಜಿ. ಆರ್. ಲಕ್ಷ್ಮಣರಾವ್, ಎಂ.ಎಸ್‌ಸಿ.

೫೫. ಇಬ್ಸನ್ನಿನ ಕೆಲವು ನಾಟಕಗಳು—ಎಸ್. ಮಂಜುನಾಥ್, ಎಂ.ಎ.

೫೬. ಶಬ್ದಪ್ರಪಂಚ—ಆರ್. ಎಲ್, ನರಸಿಂಹಯ್ಯ, ಎಂ.ಎಸ್‌ಸಿ.

೫೭. ಪ್ರಜಾಭಿಪ್ರಾಯ—ಟಿ. ಎಸ್. ರಾಜಗೋಪಾಲ
ಅಯ್ಯಂಗಾರ್, ಎಂ.ಎ., ಎಲ್‌ಎಲ್.ಬಿ.

೫೮. ಕಲ್ಲಿದ್ದಲು—ಕೆ. ಎಸ್. ಲಕ್ಷ್ಮಣರಾವ್. ಎಂಎಸ್‌ಸಿ.

೫೯. ಜನಪದಮುಕ್ತಕಗಳು—ಹೆಚ್. ಎಂ ಶಂಕರನಾರಾಯಣರಾವ್,
ಎಂ.ಎ.

೬೦. ಹಾಲು—ಕೆ. ಎಸ್. ಲಕ್ಷ್ಮಣರಾವ್, ಎಂ. ಎಸ್‌ಸಿ.,

೬೧. ಭಾವಗೀತೆ—ಎಸ್. ವಿ. ಪರಮೇಶ್ವರಭಟ್ಟ, ಎಂ ಎ.

೬೨. ಭಾರತದಲ್ಲಿ ಪ್ರಜಾಪ್ರಭುತ್ವ—ಟಿ. ಎಸ್. ರಾಜಗೋಪಾಲ
ಅಯ್ಯಂಗಾರ್, ಎಂ. ಎ., ಎಲ್‌ಎಲ್.ಬಿ.,

೬೩. ಆರೋಗ್ಯಸಾಧನೆ—ನೋಟಗಾನಹಳ್ಳಿ ಮಹದೇವಶಾಸ್ತ್ರಿ,
ಎಲ್.ಎ.ಎಂ.ಎಸ್.

೬೪. ೬೫. ಆಧುನಿಕ ಭಾರತದಲ್ಲಿ ನೃತ್ಯಕಲೆ—ಯು.ಎಸ್. ಕೃಷ್ಣರಾವ್
ಎಂ.ಎಸ್‌ಸಿ. ಮತ್ತು ಚಂದ್ರಭಾಗಾದೇವಿ
ಬೆಲೆ ಸಾದಾ ೫೦ ನಯೆಪೈಸೆ; ಉತ್ತಮ ೭೫ ನಯೆಪೈಸೆ.

೬೬. ಚುನಾವಣೆಗಳು—ಗ. ಸ. ಹಾಲಪ್ಪ, ಎಂ.ಪ. (ಕೊಲಂಬಿಯ)

೬೭. ಮೀನಿನಿಂದ ಮಾನವನೆಡೆಗೆ—ಹೆಚ್. ಬಿ. ದೇವರಾಜ ಸರ್ಕಾರ್,

೬೮. ಕ್ಷಯ—ಡಾ|| ಎಸ್. ಟಿ. ಪುಟ್ಟಣ್ಣ.

೬೯. ಶಿಲ್ಪಿಯ ಪಾತ್ರ—ಬಿ. ಎಲ್. ಸಿ. ರಾಜರ್

೭೦, ಪರತಂತ್ರ ಜೀವಿಗಳು ಮತ್ತು ಪರತಂತ್ರ ಜೀವನ— ಹೆಚ್. ಬಿ.
ದೇವರಾಜ ಸರ್ಕಾರ್

೭೧. ಮಾನವ ಹಕ್ಕುಗಳು—ಹೆಚ್. ಎಂ. ಸದಾಶಿವಯ್ಯ

೭೨. ವಿನೋದ ಗಣಿತ—ವಿ. ಕೆ. ದೊರೆಸ್ವಾಮಿ

೭೩. ಸಾಬೂನು—ಕೆ. ಎಸ್. ಲಕ್ಷ್ಮಣರಾವ್

೭೪. ಉಷ್ಣಯಂತ್ರಗಳ ಪರಿಚಯ—ಕೆ. ವಿ. ಸುಬ್ಬರಾಯ

೭೫, ಬಟ್ಟೆಗಳ ವೈಜ್ಞಾನಿಕ ಪರೀಕ್ಷೆ—ಶ್ರೀನಾಗಭೂಷಣ

ಸಾಧಾರಣ ಪ್ರತಿ ೨೫ ನಯೆಪೈಸೆ. ಉತ್ತಮ ಪ್ರತಿ ೩೭ ನಯೆಪೈಸೆ.

---

*ಈ ಪುಸ್ತಕಗಳು ಮುಗಿದುಹೋಗಿವೆ.